ಕರ್ನಾಟಕ

# ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

150 YEARS OF CELEBRATING THE MAHATMA

Vol-16 Issue No. 08 August - 2019 ₹ 10/-

## ಇತ್ತೀಚಿನ ಪ್ರಕೃತಿ ವಿಕೋಪದಿಂದ ಹಾನಿಗೊಳಗಾದ ಕರ್ನಾಟಕದ ವಿವಿಧ ಜಿಲ್ಲೆಗಳ ಪರಿಹಾರ ಕೇಂದ್ರಗಳಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಸೇವೆಯಲ್ಲಿ ತೊಡಗಿರುವುದು



ವಿಜಯಪುರ



ಚಾಮರಾಜನಗರ



ಶಿವಮೊಗ್ಗ



ಕೊಡಗು



ಬೆಳಗಾವಿ



ಆಗಸ್ಟ್ 14ರಂದು ಕರ್ನಾಟಕ ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿಗಳು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಯಡಿಯೂರಪ್ಪ ಅವರನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಭೇಟಿ ಮಾಡಿ ಪುಷ್ಪಗುಚ್ಛ ನೀಡಿ ಶುಭಕೋರಿದರು. ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಮೋಹನ್ ಕೊಂಡಜ್ಜಿ, ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಎಂ.ಎ. ಖಾಲಿದ್, ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಬಿ.ಕೆ. ಬಸವರಾಜ ಇತರರು ಚಿತ್ರದಲ್ಲಿದ್ದಾರೆ.




ಆಗಸ್ಟ್ 15ರಂದು ಗದಗ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ಪ್ರಥಮ ಬಹುಮಾನ ಪಡೆದ ಕೆ.ಎಲ್.ಇ. ಶಾಲೆಯ ಸ್ಕೌಟ್ ತಂಡಕ್ಕೆ ಮಾನ್ಯ ಶಾಸಕರಾದ ಶ್ರೀ ಹೆಚ್.ಕೆ. ಪಾಟೀಲ್ ಅವರು ಪಾರಿತೋಷಕವನ್ನು ನೀಡಿದರು. ಜಿಲ್ಲಾ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಹಾಗೂ ಸ್ಕೌಟ್ಸ್‌ಗಳು ಚಿತ್ರದಲ್ಲಿದ್ದಾರೆ.

ಆಗಸ್ಟ್ 15ರಂದು ಚಿಕ್ಕಮಗಳೂರು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ದ್ವಿತೀಯ ಬಹುಮಾನ ಪಡೆದ ವಾಸವಿ ವಿದ್ಯಾಲಯ ಸ್ಕೌಟ್ ತಂಡಕ್ಕೆ ಮಾನ್ಯ ಶಾಸಕರಾದ ಶ್ರೀ ಸಿ.ಟಿ. ರವಿ ಅವರು ಪಾರಿತೋಷಕವನ್ನು ನೀಡಿದರು. ಜಿಲ್ಲಾಧಿಕಾರಿಗಳಾದ ಶ್ರೀ ಬುಗಾದಿ ಗೌತಮ್, ವಿಧಾನ ಪರಿಷತ್ತಿನ ಮಾನ್ಯ ಉಪಸಭಾಪತಿಗಳಾದ ಶ್ರೀ ಎಸ್.ಎಲ್. ಧರ್ಮೇಗೌಡ, ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಬೋಜೇಗೌಡ, ಜಿ.ಪಂ. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀಮತಿ ಅಶ್ವತಿ, ವಿಶೇಷ ಜಿಲ್ಲಾಧಿಕಾರಿ ಶ್ರೀ ಕುಮಾರ್ ಹಾಗೂ ಇತರರು ಚಿತ್ರದಲ್ಲಿದ್ದಾರೆ.









# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# KARNATAKA Scout & Guide

MONTHLY NEWS MAGAZINE





ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.


## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ



ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,
ಸಸ್ನೇಹ ನಮಸ್ಕಾರಗಳು

ತಿಂಗಳ ಧ್ಯೇಯ ವಾಕ್ಯ: "ಸ್ವತಂತ್ರ ಭಾರತ ನಮ್ಮ ಸಂಪತ್ತು"

ಕಳೆದ 100 ವರ್ಷಗಳಲ್ಲಿ ಅತೀ ಭೀಕರ ಎನ್ನಬಹುದಾದ ಪ್ರವಾಹ ಪರಿಸ್ಥಿತಿ ಕರ್ನಾಟಕದಲ್ಲಿ ಈಗ ನಿರ್ಮಾಣವಾಗಿದೆ. ಮಳೆಗಾಲದ ಮೊದಲ ಎರಡು ತಿಂಗಳು ಬರದ ಛಾಯೆಯನ್ನು ಬೀಸಿತು. ಆದರೆ, ಆಗಸ್ಟ್ ತಿಂಗಳ 3 ರಿಂದ ಬಿದ್ದ ಮಳೆ 22 ಜಿಲ್ಲೆಗಳಲ್ಲಿ (103 ತಾಲ್ಲೂಕು) ಹೆಚ್ಚಾಗಿ, ಬೆಳಗಾವಿ, ಬಾಗಲಕೋಟೆ, ವಿಜಯಪುರ, ರಾಯಚೂರು, ಯಾದಗಿರಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗ, ಕೊಡಗು, ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಹಾನಿಯನ್ನುಂಟು ಮಾಡಿದೆ. ಮನೆ, ಶಾಲೆ ಮುಂತಾದ ಜನವಸತಿ ಪ್ರದೇಶಗಳು ಭೀಕರ ಪ್ರವಾಹಕ್ಕೆ ಕೊಚ್ಚಿಹೋಗಿವೆ. ಭೂ ಕುಸಿತ ಮತ್ತು ರಸ್ತೆಗಳಿಗಾಗಿರುವ ಹಾನಿಯಿಂದ ಸಂಚಾರವು ಅಸ್ತವ್ಯಸ್ತವಾಗಿದೆ. ಸುಮಾರು 65 ಜನರು ಸಾವನ್ನಪ್ಪಿದ್ದಾರೆ. 15 ಜನರು ಕಾಣೆಯಾಗಿದ್ದಾರೆ. ಅಪಾರ ಪ್ರಮಾಣದ ಜಾನುವಾರುಗಳು ನಷ್ಟವಾಗಿವೆ. ಸರ್ಕಾರವು ಅವಿರತ ಪ್ರಯತ್ನದಿಂದ ಸುಮಾರು 7 ಲಕ್ಷ ಜನರನ್ನು ಸುರಕ್ಷಿತ / ಗಂಜಿ ಕೇಂದ್ರಗಳಿಗೆ ವರ್ಗಾಯಿಸಿದ್ದಾರೆ. ಸಾವಿರಾರು ಜಾನುವಾರುಗಳ ರಕ್ಷಣೆಯಾಗಿದೆ. 7 ಲಕ್ಷ ಹೆಕ್ಟೇರ್ ಪ್ರದೇಶದ ಬೆಳೆ ನಷ್ಟವಾಗಿದೆ. ಅಂದಾಜು 40 ಸಾವಿರ ಕೋಟಿ ಹಾನಿಯಾಗಿದೆ.



ಕರ್ನಾಟಕ ರಾಜ್ಯ ಸರ್ಕಾರವು ಪರಿಹಾರ ಕ್ರಮಗಳನ್ನು ಕೈಗೊಂಡಿದೆ. ಕೇಂದ್ರ ಸರ್ಕಾರ, ಎಸ್.ಡಿ.ಆರ್.ಎಫ್, ಎನ್.ಡಿ.ಆರ್.ಎಫ್, ಭೂ, ವಾಯು ಮತ್ತು ನೌಕಾಪಡೆಗಳು, ಅಗ್ನಿಶಾಮಕ ದಳಗಳು ಮತ್ತು ತುರ್ತು ಚಿಕಿತ್ಸಾ ದಳಗಳು ಜನರನ್ನು ಸುರಕ್ಷಿತ ಸ್ಥಳಗಳಿಗೆ ಸಾಗಿಸಲು ಅಪಾರ ಪ್ರಯತ್ನವನ್ನು ಮಾಡಿವೆ. ಕೇಂದ್ರ ಗೃಹ ಮಂತ್ರಿ ಶ್ರೀ ಅಮಿತ್ ಶಾ ಮತ್ತು ಮುಖ್ಯ ಮಂತ್ರಿ ಶ್ರೀ ಬಿ.ಎಸ್.ಯಡಿಯೂರಪ್ಪರವರು ಸರ್ವೇಕ್ಷಣ ನಡೆಸಿದ್ದಾರೆ. ಕೇಂದ್ರ ಸರ್ಕಾರವು ಸದ್ಯಕ್ಕೆ ರೂ.428 ಕೋಟಿ ಪರಿಹಾರವನ್ನು ಬಿಡುಗಡೆ ಮಾಡಿದೆ.

ನಮ್ಮ ಸಂಸ್ಥೆಯು ಪ್ರವಾಹ ಪರಿಹಾರ ಕಾರ್ಯಗಳಲ್ಲಿ ತೀವ್ರವಾಗಿ ತೊಡಗಿಸಿಕೊಂಡಿತು. ಗಂಜಿ ಕೇಂದ್ರಗಳಲ್ಲಿ ಸೇವೆ, ಪ್ರವಾಹ ಪೀಡಿತರ ರಕ್ಷಣೆ ಮತ್ತು ಅವರಿಗೆ ಅಗತ್ಯವಾದ ವಸ್ತುಗಳನ್ನು ಸಂಗ್ರಹಿಸಿ ವಿತರಿಸುವುದರಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತೊಡಗಿಕೊಂಡರು. ಜನರ ಕಷ್ಟಕ್ಕೆ ಸ್ಪಂದಿಸುವ ಮನಸ್ಸು, ತೊಡಗಿಕೊಳ್ಳಲು ಅನುವಾಗುವ ಮಾನಸಿಕ ಮತ್ತು ಶಾರೀರಿಕ ಶ್ರಮ, ಪರಿಹಾರ ಕಾರ್ಯ ನಿರ್ವಹಣೆ/ ಅನುಷ್ಠಾನಕ್ಕೆ ಬೇಕಾಗುವ ತಾಳ್ಮೆ, ಸೂಕ್ತ ಮಾರ್ಗದರ್ಶನ ಮುಂತಾದ ಗುಣಗಳು ಈ ಸವಾಲಿನ ಸಮಯದಲ್ಲಿ ಅಭಿವ್ಯಕ್ತಿಯಾಯಿತು. ಪರಿಹಾರ ಕಾರ್ಯದಲ್ಲಿ ತೊಡಗಿಕೊಂಡ ಎಲ್ಲಾ ಕಿರಿಯ ಮತ್ತು ಹಿರಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರನ್ನು ನಾನು ಮನಸ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಸ್ಕೌಟ್ಸ್‌ನ ಮುಖ್ಯ ಧ್ಯೇಯವಾದ "ಸೇವೆಗೆ ಸದಾ ಸಿದ್ಧ"ವೆಂಬುದನ್ನು ನೀವೆಲ್ಲರೂ ಸಾಬೀತು ಮಾಡಿದ್ದೀರಿ. ನಮ್ಮ ಈ ಸೇವಾ ಕಾರ್ಯವನ್ನು ಸರ್ಕಾರ ಮತ್ತು ಸಾರ್ವಜನಿಕರು ಗಮನಿಸಿದ್ದಾರೆ.





ಭಾರತವು 73ನೆಯ ಸ್ವಾತಂತ್ರ್ಯ ದಿನವನ್ನು ಅದ್ದೂರಿಯಾಗಿ ಆಚರಿಸಿತು. ಕೆಂಪು ಕೋಟೆಯಲ್ಲಿ ಧ್ವಜವಂದಿಸಿದ ಪ್ರಧಾನಿ ಶ್ರೀ ನರೇಂದ್ರ ಮೋದಿಯವರು ಭವಿಷ್ಯ ಭಾರತದ ರೂಪುರೇಷೆಗಳನ್ನು ಗುರುತಿಸಿದರು. "ಒಂದು ರಾಷ್ಟ್ರ-ಒಂದು ಸಂವಿಧಾನ"ದ ಕನಸು, ಸಂವಿಧಾನದ ಪರಿಚ್ಛೇದ 370 ಮತ್ತು 35(ಎ)ಗಳ ರದ್ಧತಿಯಿಂದ ಸಾಧ್ಯವಾಗಿದೆ. ಜಮ್ಮು-ಕಾಶ್ಮೀರ ಮತ್ತು ಲಡಾಖ್ ಕೇಂದ್ರಾಡಳಿತ ಪ್ರದೇಶವನ್ನು ಭಾರತದ ಇತರ ಭಾಗಗಳಂತೆ ಶಾಂತಿಯುಕ್ತ ಪ್ರಗತಿಪರವನ್ನಾಗಿ ರೂಪಿಸಲಾಗುವುದು. ಹೆಚ್ಚು ಬಂಡವಾಳದ ಹೂಡಿಕೆ, ಉದ್ಯೋಗ ನಿರ್ಮಾಣ, ಮುಂತಾದ ಕಾರ್ಯಗಳೆಡೆ ಗಮನಹರಿಸಲಾಗುವುದು. ಭಾರತದ ಬೆಳವಣಿಗೆಗೆ ಜನಸಂಖ್ಯಾ ನಿಯಂತ್ರಣ ಅಗತ್ಯವೆಂದು ಪ್ರತಿಪಾದಿಸಿದ ಪ್ರಧಾನಮಂತ್ರಿಯವರು ಭ್ರಷ್ಟಾಚಾರದ ಮೂಲೋತ್ಪಾಟನೆ ಆಗಬೇಕೆಂದರು. ಜಲ ಶಕ್ತಿ ಸಚಿವಾಲಯವನ್ನು ಹೊಸದಾಗಿ ಆರಂಭಿಸಲಾಗಿದೆ. "ಜಲ ಜೀವನ ಮಿಷನ್"ನಲ್ಲಿ ರೂ. 3.70ಲಕ್ಷ ಕೋಟಿಗಳನ್ನು ತೊಡಗಿಸಲಾಗುವುದು. ವ್ಯಾಪಾರ ವಹಿವಾಟುಗಳನ್ನು ಸರಳವಾಗಿ ಮಾಡಲು ಅನುವಾಗುವಂತೆ ಕಾರ್ಯಚಟುವಟಿಕೆಗಳನ್ನು ರೂಪಿಸಲಾಗುವುದು. ಅಧೋರಚನೆಯನ್ನು ನಿರ್ಮಾಣ ಮಾಡಿ, 5 ದಶಲಕ್ಷ ಡಾಲರ್ ಆರ್ಥಿಕತೆಯನ್ನು ಬೆಳೆಸಲಾಗುವುದು ಎಂದರು. 3 ರಕ್ಷಣಾ ದಳಗಳಿಗೆ ಮುಖ್ಯಸ್ಥರನ್ನು ನೇಮಕ ಮಾಡುವ ಘೋಷಣೆಯನ್ನು ಪ್ರಧಾನ ಮಂತ್ರಿಗಳು ಮಾಡಿದರು. ಬಹಳ ಮುಖ್ಯವಾಗಿ ಪ್ರಧಾನಮಂತ್ರಿಗಳು ಪ್ಲಾಸ್ಟಿಕ್ ವಿರುದ್ಧ ಸಮರವನ್ನು ಸಾರಿದ್ದಾರೆ. ಪರಿಸರ ರಕ್ಷಣೆ, ಸ್ಕೌಟ್-ಗೈಡ್‌ಗಳ ಆದ್ಯ ಕರ್ತವ್ಯವಾಗಿದೆ. ನಾವೆಲ್ಲರೂ ಪ್ರಧಾನ ಮಂತ್ರಿಯವರೊಡನೆ ಕೈಜೋಡಿಸಿ ಭಾರತವನ್ನು ಅತೀ ಶೀಘ್ರದಲ್ಲಿ ಪ್ಲಾಸ್ಟಿಕ್ ಮುಕ್ತ ರಾಷ್ಟ್ರವನ್ನಾಗಿ ರೂಪಿಸಬೇಕಾಗಿದೆ.

ನಮ್ಮ ತಾಲ್ಲೂಕು ಜಿಲ್ಲಾ ಮತ್ತು ಸ್ಥಳೀಯ ಕೇಂದ್ರಗಳಲ್ಲಿ ರಾಜ್ಯೋತ್ಸವವನ್ನು ಅದ್ದೂರಿಯಾಗಿ ಆಚರಿಸಿದ ವರದಿಗಳು ಬಂದಿದೆ. ಪಥಸಂಚಲನದಲ್ಲಿ ನಮ್ಮ ಮಕ್ಕಳು ಅನೇಕ ಬಹುಮಾನಗಳನ್ನು ಪಡೆದುಕೊಂಡಿದ್ದಾರೆ. ಸ್ಥಳೀಯ, ತಾಲ್ಲೂಕು ಮತ್ತು ಜಿಲ್ಲಾ ಸಂಸ್ಥೆಗಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. "ಶಾಂತಿಗೃಹ" ಮುಖ್ಯ ಕಛೇರಿಯಲ್ಲಿ, ಸ್ವಾತಂತ್ರ್ಯೋತ್ಸವ ಪಥಸಂಚಲನದಲ್ಲಿ ಭಾಗವಹಿಸುವ ಮಕ್ಕಳಿಗಾಗಿ ವಿಶೇಷ ಶಿಬಿರವನ್ನು ಏರ್ಪಡಿಸಲಾಗಿತ್ತು. 24 ಜಿಲ್ಲೆಗಳಿಂದ ಬಂದಿದ್ದ 111 ಸ್ಕೌಟ್-ಗೈಡ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು. ನಮ್ಮ ಪಥಸಂಚಲನವು ಸ್ವಾತಂತ್ರ್ಯೋತ್ಸವದಲ್ಲಿ ಭಾಗವಹಿಸಿದ್ದ ಕರ್ನಾಟಕದ ಮುಖ್ಯ ಮಂತ್ರಿಗಳು ಮತ್ತು ಹಿರಿಯ ಅಧಿಕಾರಿಗಳ ಗಮನವನ್ನು ಸೆಳೆದಿರುವುದು ಬಹಳ ಸಂತೋಷದ ವಿಷಯ.




"ಹೊಸ ವಿಶ್ವದ ಕೀಲಿ ತೆಗೆಯೋಣ" ಎಂಬ ಧ್ಯೇಯವಾಕ್ಯವನ್ನು ಹೊಂದಿದ 24ನೆಯ ವಿಶ್ವ ಜಾಂಬೂರಿಯಲ್ಲಿ ಭಾಗವಹಿಸುವ ಸಂತೋಷವು ನನ್ನದಾಗಿತ್ತು. ಭಾರತ ತಂಡದ ಮುಖ್ಯಸ್ಥನ ಜವಾಬ್ದಾರಿಯನ್ನು ನನ್ನ ಹೆಗಲಿಗೇರಿಸಿದ್ದರು. ಜಾಂಬೂರಿಯಲ್ಲಿನ ಶಿಸ್ತು, ವ್ಯವಸ್ಥೆ ಅತ್ಯುತ್ತಮವಾಗಿತ್ತು. ಜಗತ್ತಿನಾದ್ಯಂತ 135 ದೇಶಗಳಿಂದ ಬಂದಿದ್ದ ಸುಮಾರು 50 ಸಾವಿರಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು "ವಿಶ್ವವು ಒಂದೇ- ಮಾನವತೆ ಒಂದೇ" ಎಂಬುದನ್ನು ತಮ್ಮ ಕಾರ್ಯಚಟುವಟಿಕೆಗಳ ಮೂಲಕ ಘೋಷಿಸಿದರು.




ಕರ್ನಾಟಕದಿಂದ 80 ಸ್ಕೌಟ್ಸ್ ಮತ್ತು ಗೈಡ್ಸ್ ವಿಶ್ವಜಾಂಬೂರಿಯಲ್ಲಿ ಭಾಗವಹಿಸಿದ್ದರು. ಕರ್ನಾಟಕ ಸಾಂಸ್ಕೃತಿಯ ಅಭಿವ್ಯಕ್ತಿಯನ್ನು ಬಹಳ ಸಮರ್ಪಕವಾಗಿ ಜಾಂಬೂರಿಯಲ್ಲಿ ಮಾಡಿದರು. ತಂಡದ ಭಾಗವಹಿಸುವಿಕೆ ನನಗೆ ಆನಂದವನ್ನುಂಟುಮಾಡಿದೆ ಜಾಂಬೂರಿಯಲ್ಲಿ ಭಾಗವಹಿಸಿದ ಎಲ್ಲರನ್ನೂ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಇಂತಹ ದೊಡ್ಡ ಪ್ರಮಾಣದ ಜಾಂಬೂರಿಯನ್ನು ಆದಷ್ಟು ಶೀಘ್ರದಲ್ಲಿ ನಾವೂಕೂಡ ಸಂಘಟಿಸುವ ಆಲೋಚನೆ ಮಾಡೋಣ.






ಚಂದ್ರಯಾನ –2ರ ಬಗ್ಗೆ ಕಳೆದ ಸಂಚಿಕೆಯಲ್ಲಿ ಬರೆದಿದ್ದೇನೆ. ಚಂದ್ರಯಾನ ಯೋಜನೆಯು ಯಶಸ್ವಿಯಾಗಿ ನಿಗಧಿತ ಸಮಯಕ್ಕೆ ನಡೆಯುತ್ತಿದೆ. ಆಗಸ್ಟ್ 20ರಂದು ಚಂದ್ರಯಾನ 2ನ್ನು ಯಶಸ್ವಿಯಾಗಿ ಚಂದ್ರನ ಕಕ್ಷೆಗೆ ಸೇರಿಸಲಾಗಿದೆ. ಶೀಘ್ರದಲ್ಲಿ ನೌಕೆಯು ಚಂದ್ರನನ್ನು 100 ಕಿ.ಮೀ. ನಷ್ಟು ಸಮೀಪಿಸುತ್ತದೆ. ನಂತರ ಸೂರ್ಯನ ದಕ್ಷಿಣ ಧ್ರುವ ಪ್ರದೇಶದಲ್ಲಿ ಸೆಪ್ಟೆಂಬರ್ 7ರಂದು ಇಳಿಯಲಿದೆ. ಯೋಜನೆಯು ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ. ನಮ್ಮ ವಿಜ್ಞಾನಿಗಳ ಮಹಾನ್ ಸಾಧನೆಯ ಬಗ್ಗೆ ನನಗೆ ಹೆಮ್ಮೆ ಎನಿಸುತ್ತದೆ.

ನಮ್ಮ ತರಬೇತಿ ಶಿಬಿರ ಮತ್ತು ಇನ್ನಿತರ ಚಟುವಟಿಕೆಗಳು ವೇಳಾಪಟ್ಟಿಯಂತೆ ನಡೆಯುತ್ತಿವೆ. ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ನಡೆಯುತ್ತಿರುವ ಸೇವಾ ಶಿಬಿರದಲ್ಲಿ ಉತ್ತಮ ಪರಿಸರವನ್ನು ನಿರ್ಮಿಸುವ ಕೆಲಸ ನಡೆಯುತ್ತಿದೆ. ಹೊಸ ಸಸಿಗಳನ್ನು ನೆಡಲಾಗುತ್ತಿದೆ. ಅನುಕರಣೀಯವಾದ ಚಟುವಟಿಕೆ.



ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ. ಪರೀಕ್ಷೆಗಳಲ್ಲಿ ಬಹುಮಾನ ಪಡೆದ ಮಕ್ಕಳನ್ನು ಆಗಸ್ಟ್ 10ರಂದು ಸನ್ಮಾನಿಸಲಾಯಿತು. ಕರ್ನಾಟಕ ದರ್ಶನದ ಬಗ್ಗೆ ಪ್ರಬಂಧವನ್ನು ಬರೆದು ಬಹುಮಾನಗಳನ್ನು ಪಡೆದ ಮಕ್ಕಳನ್ನೂ ಸನ್ಮಾನಿಸಲಾಯಿತು.

ಬೀದರ್, ಗುಲ್ಬರ್ಗ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಗಳಿಗೆ ದಿನಾಂಕ 20 ರಿಂದ 24ರವರೆಗೆ ಭೇಟಿ ನೀಡಿ ಅಲ್ಲಿನ ಕಾರ್ಯಚಟುವಟಿಕೆಗಳನ್ನು ಪರಿಶೀಲಿಸಿದೆನು. ಆಗಸ್ಟ್ 26ರಂದು ಮೈಸೂರು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳೊಂದಿಗೂ ಸಭೆಯನ್ನು ನಡೆಸಿದೆನು.



ನನ್ನ ವಿದ್ಯಾರ್ಥಿದೆಸೆಯ ಗೆಳೆಯ ಶ್ರೀ ಅರುಣ್ ಜೇಟ್ಲಿ (28.12.1952 – 24.08.2019) ಅವರ ನಿಧನವು ನನಗೆ ಅಪಾರ ನೋವುಂಟು ಮಾಡಿದೆ. 1973ರಲ್ಲಿ ಶ್ರೀ ಜೇಟ್ಲಿರವರು ದೆಹಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿನಾಯಕರಾಗಿದ್ದರು. ಅವರೊಡನೆ ಕೂಡಿ ನಡೆಸಿದ ಪತ್ರಿಕಾ ಸಮ್ಮೇಳನ ಈಗಲೂ ನೆನಪಿನಲ್ಲಿದೆ. ಸದಾನಗುತ್ತಾ ಎಲ್ಲರೊಂದಿಗೆ ಬೆರೆತು ಕಷ್ಟಕಪಾಣ್ಯಗಳನ್ನು ಅರ್ಥಮಾಡಿಕೊಳ್ಳುತ್ತಾ ಸಮಸ್ಯೆಗಳನ್ನು ಪರಿಹರಿಸುವುದು ಜೇಟ್ಲಿಯವರ ಜಾಣತನ, ಮುಂದೆ ರಾಜಕೀಯದಲ್ಲಿ ಪ್ರಬುದ್ಧವಾಗಿ ಬೆಳೆದ ಜೇಟ್ಲಿಯವರು ಕಾನೂನು ತಜ್ಞರು, ರಾಜಕೀಯ ತಂತ್ರಜ್ಞರು. ಹಣಕಾಸು ಸೇರಿದಂತೆ ಕೇಂದ್ರ ಸರ್ಕಾರದಲ್ಲಿ ಹಲವಾರು ಪ್ರಮುಖ ಖಾತೆಗಳನ್ನು ನಿರ್ವಹಿಸಿದ್ದರು. ಕ್ರಿಕೆಟ್‌ನಲ್ಲಿ ಅಪಾರ ಆಸಕ್ತಿ ಹೊಂದಿದ್ದ ಜೇಟ್ಲಿಯವರು ಕ್ರೀಡಾ ಪ್ರೇಮಿ. ಭಾರತವು ಮರೆಯಲಾಗದ ಬಹುಶ್ರತ ಮೇಧಾವಿ. ಜೇಟ್ಲಿಯವರ ಕುಟುಂಬಕ್ಕೆ ಸಂತಾಪಗಳನ್ನು ತಿಳಿಸಬಯಸುತ್ತೇನೆ.



ನಿಮಗೆಲ್ಲರಿಗೂ ಗೌರಿ–ಗಣೇಶ ಹಬ್ಬದ ಹಾರ್ಥಿಕ ಶುಭಾಶಯಗಳು. ಪರಿಸರ ಮಾಲಿನ್ಯವಾಗದಂತೆ ಮಣ್ಣಿನಲ್ಲಿ ಮಾಡುವ ಗಣೇಶ ಮೂರ್ತಿಯನ್ನೇ ಪೂಜಾ ಕಾರ್ಯಕ್ಕೆ ಬಳಸಿರಿ.

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

(ಪಿ.ಜಿ.ಆರ್. ಸಿಂಧ್ಯ)

ರಾಜ್ಯ ಮುಖ್ಯ ಆಯುಕ್ತರು






प्रधान मंत्री
**Prime Minister**

New Delhi
श्रावण 03, शक संवत् 1941
25th July, 2019

**Shri P.G.R. Sindhia Ji,**

Thank you for your congratulatory message on the historic success of the BJP and NDA in the 2019 Lok Sabha elections.

Through the verdict, 130 crore Indians have reaffirmed their unwavering faith in politics of development and good governance. The people of India have voted for a strong and stable Government, which can fulfil the aspirations of India's youth.

Over the last five years, the NDA Government has taken path-breaking and futuristic decisions that have brought a positive difference in people's lives.

The stupendous work in the last 5 years convinces me that with the right effort and determination, the impossible can become possible.

You would be happy to know that we are hitting the ground running from the word go. After-all, there is a lot to be done. By 2022, we want every Indian to have a home. We also want the income of farmers to be doubled. The Government has extensive plans to make India a 5 trillion dollar economy. To harness the potential of our youth, we want to make India the top start-up destination in the world.

Guided by 'Sabka Saath, Sabka Vikas, Sabka Vishwas', we will continue to make development a mass movement and provide progressive, development oriented and corruption free governance to build a strong, prosperous and inclusive India.

Yours,

**(Narendra Modi)**

**Shri P.G.R. Sindhia**
39, Shantigruha, Palace Road
Bengaluru
Karnataka - 560001

# ಎರಡು ಪ್ರಸಂಗಗಳು

ಗೊ.ರು. ಚನ್ನಬಸಪ್ಪ
ಗೌರವ ಅಧ್ಯಕ್ಷರು
ಪ್ರಕಟಣಾ ಸಮಿತಿ, ಭಾ.ಸ್ಕೌ&ಗೈ, ಕರ್ನಾಟಕ

ಎರಡನೆಯ ಜಾಗತಿಕ ಮಹಾಯುದ್ಧದ (1942) ಸಂದರ್ಭ. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ನೇತಾಜಿ ಸುಭಾಷ್‌ಚಂದ್ರ ಭೋಸ್ ಅವರು ಆ ಯುದ್ಧದಲ್ಲಿ ಬ್ರಿಟಿಷರ ವಿರುದ್ಧ ವಿದ್ದರು. ಯುದ್ಧದಲ್ಲಿ ಭಾರತೀಯರು ಬ್ರಿಟಿಷರಿಗೆ ಬೆಂಬಲ ನೀಡಬೇಕೆಂಬ ಅಂದಿನ ರಾಷ್ಟ್ರನಾಯಕರ ಅಭಿಪ್ರಾಯವನ್ನು ನೇತಾಜಿ ಅವರು ಒಪ್ಪದೆ ಜಪಾನ್ ಪರವಾಗಿ ನಿಂತರು.

ಅವರು ಜಪಾನಿನಲ್ಲಿದ್ದಾಗ ಒಂದು ದಿನ ಶಾಲೆಗೆ ಭೇಟಿ ಕೊಟ್ಟರಂತೆ. ಅವರ ಭೇಟಿ ಆ ಶಾಲೆಯ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಅತ್ಯಂತ ಸಂತೋಷದ ಸಂದರ್ಭವಾಗಿತ್ತು. ಶಾಲೆಯ ತರಗತಿಯೊಂದಕ್ಕೆ ನೇತಾಜಿ ಅವರು ಪ್ರವೇಶಿಸುತ್ತಿದ್ದಂತೆಯೇ ವಿದ್ಯಾರ್ಥಿಗಳೆಲ್ಲ ಎದ್ದುನಿಂತು ಅಲ್ಲಿನ ಸಂಪ್ರದಾಯದಂತೆ ಗೌರವ ಸಲ್ಲಿಸಿದರು.

ಈ ವಿದ್ಯಾರ್ಥಿಗಳ ಶಿಸ್ತನ್ನು ಗಮನಿಸಿದ ನೇತಾಜಿ "ಮಕ್ಕಳೇ, ನಿಮ್ಮ ಶಾಲೆಗೆ ಒಂದು ವೇಳೆ ಬುದ್ಧ ಬಂದರೆ, ನೀವೆಲ್ಲ ಏನು ಮಾಡುತ್ತೀರಿ?" ಎಂದು ಕೇಳಿದರು. ಆಗ ಆ ಮಕ್ಕಳೆಲ್ಲ ಒಕ್ಕೊರಲಿನಿಂದ "ಈಗ ನಿಮಗೆ ತೋರಿಸಿದಂತೆ ನಾವೆಲ್ಲ ಒಟ್ಟಾಗಿ ಎದ್ದುನಿಂತು ಗೌರವ ಸಲ್ಲಿಸುತ್ತೇವೆ" ಎಂದರಂತೆ. ಆಗ ನೇತಾಜಿ, "ಒಂದು ವೇಳೆ ಬುದ್ಧ ತನ್ನ ಕೈಯಲ್ಲಿ ಖಡ್ಗ ಹಿಡಿದು ಬಂದರೆ, ಆಗ ಏನು ಮಾಡುತ್ತೀರಿ?" ಎಂದು ಇನ್ನೊಂದು ಪ್ರಶ್ನೆ ಕೇಳಿದರು. ಅದಕ್ಕೆ ಆ ಮಕ್ಕಳು ಒಕ್ಕೊರಲಿನಿಂದ "ನಾವು ಖಡ್ಗ ಹಿಡಿದು ಆ ಬುದ್ಧನನ್ನು ನಮ್ಮ ದೇಶದಿಂದ ಓಡಿಸಿಬಿಡುತ್ತೇವೆ" ಎಂದರಂತೆ! ಆ ಮಕ್ಕಳ ಉತ್ತರ ಕೇಳಿ ನೇತಾಜಿ ಅವರಿಗೆ ಆದ ಆನಂದ ಅಷ್ಟಿಷ್ಟಲ್ಲ. "ಭೇಷ್ ಮಕ್ಕಳೆ, ನಿಮಗೆ ಬುದ್ಧ ಒಳ್ಳೆಯದು ಮಾಡಲಿ" ಎಂದರಂತೆ!.

ಜಪಾನ್ ಬೌದ್ಧ ಧರ್ಮದ ದೇಶ. ಬುದ್ಧ ಅವರ ಧರ್ಮಗುರು. ತಮ್ಮ ಗುರುವಿನ ಬಗೆಗೆ ಅಲ್ಲಿನ ಜನರಿಗೆ ಅಪಾರ ಭಕ್ತಿ. ವಿದ್ಯಾರ್ಥಿಗಳಿಗೂ ಬುದ್ಧನ ಬಗೆಗೆ ತಿಳಿದಿತ್ತು. ಅಹಿಂಸೆ ಮತ್ತು ಶಾಂತಿಯನ್ನು ಸಾರಿದ ಬುದ್ಧ ತಮ್ಮ ಶಾಲೆಗೆ ಬಂದರೆ ಅದಕ್ಕಿಂತ ಮಿಗಿಲಾದ ಸಂತೋಷದ ಸಂದರ್ಭವುಂಟೆ? ಅಂತೆ ಬುದ್ಧ ಬಂದರೆ ಎದ್ದು ನಿಂತು ತಲೆಬಾಗಿ ನಮಸ್ಕರಿಸಿ ಗೌರವ ಸಲ್ಲಿಸುತ್ತೇವೆ ಎಂದಿದ್ದರು. ಆದರೆ, ಅದೇ ಬುದ್ಧ ತನ್ನ ಕೈಯಲ್ಲಿ ಖಡ್ಗ ಹಿಡಿದು ಬಂದರೆ ಅವನ ವಿರುದ್ಧ ತಾವೂ ಖಡ್ಗ ಹಿಡಿದು ತಮ್ಮ ದೇಶದಿಂದಲೇ ಓಡಿಸಿಬಿಡುತ್ತೇವೆ ಎಂದರು.



ಈ ಪ್ರಸಂಗ ಜಪಾನ್ ದೇಶದ ಮಕ್ಕಳ ದೇಶಪ್ರೇಮಕ್ಕೆ ಒಂದು ಉಜ್ವಲ ಉದಾಹರಣೆಯಾಗಿದೆ. 'ಧರ್ಮಕ್ಕಿಂತ ದೇಶ ದೊಡ್ಡದು, ದೇಶ ಉಳಿದರೆ ಧರ್ಮ ಉಳಿಯುತ್ತದೆ. ಆದ್ದರಿಂದ ದೇಶದ ರಕ್ಷಣೆ ಪ್ರತಿಯೊಬ್ಬನ ಕರ್ತವ್ಯ' ಎಂಬ ಅರಿವನ್ನು ಅಲ್ಲಿನ ಶಿಕ್ಷಣ ಆ ಮಕ್ಕಳಿಗೆಲ್ಲ ನೀಡಿದೆ. ನಮ್ಮ ದೇಶದ ಮಕ್ಕಳಲ್ಲಿ ಆ ದೇಶಾಭಿಮಾನ ತುಂಬಬೇಕು.





1962 ರಲ್ಲೀ ಚೀನಾದೇಶ ಭಾರತದ ಮೇಲೆ ಯುದ್ಧ ನಡೆಸಿತು. ಆ ಸಂದರ್ಭದಲ್ಲಿ ನಮ್ಮ ಭಾರತೀಯ ಸೈನಿಕರು ಉತ್ತರದ ಹಿಮಾಲಯ ಪರ್ವತದ ಗಡಿ ಪ್ರದೇಶದಲ್ಲಿ ಅಪಾರ ಕಷ್ಟಪಟ್ಟು ಹೋರಾಟ ನಡೆಸಿದರು. ಯಾವುದೇ ದೇಶದಲ್ಲಿ ಗಡಿ ರಕ್ಷಣೆ ಅತ್ಯಂತ ಮುಖ್ಯವಾದುದು.

ಯಾವುದೇ ಕಾರಣವಿಲ್ಲದೆ ಚೀನಾ ದೇಶ ಆ ಯುದ್ಧಕ್ಕೆ ಮುಂದಾಗಿತ್ತು. ಒಂದು ವೇಳೆ ನಮ್ಮ ಸೈನ್ಯ ದಿಟ್ಟವಾಗಿ ಹೋರಾಡದಿದ್ದರೆ ನಮ್ಮದಾದ ಪ್ರದೇಶವನ್ನು ಶತ್ರುಗಳಿಗೆ ಬಿಟ್ಟುಕೊಡಬೇಕಾಗುತ್ತಿತ್ತು. ಆದ್ದರಿಂದ ನಮ್ಮ ಸೈನಿಕರು ಎಷ್ಟೇ ಕಷ್ಟವೆನಿಸಿದರೂ ದಿಟ್ಟತನದಿಂದ ಹೋರಾಡಿದರು. ಆ ಹೋರಾಟದ ಸಂದರ್ಭದಲ್ಲಿ ಕೆಲವು ಸೈನಿಕರಿಗೆ ತೀವ್ರವಾದ ಗಾಯಗಳಾದವು.

ಹಾಗೆ ತೀವ್ರವಾಗಿ ಗಾಯಗೊಂಡ ಒಬ್ಬ ಸೈನಿಕನನ್ನು ಮಿಲಿಟರಿ ಆಸ್ಪತ್ರೆಗೆ ಸೇರಿಸಲಾಗಿತ್ತು. ಗಾಯಾಳುಗಳಾದ ಸೈನಿಕರನ್ನು ಕಂಡು ಮಾತನಾಡಿಸಿ ಅವರಿಗೆ ಸಮಾಧಾನ ಹೇಳಲೆಂದು ಆಗ ನಮ್ಮ ದೇಶದ ಪ್ರಧಾನಿಯಾಗಿದ್ದ ಲಾಲ್ ಬಹದ್ದೂರ್ ಶಾಸ್ತ್ರಿ ಅವರು ಆ ಮಿಲಿಟರಿ ಆಸ್ಪತ್ರೆಗೆ ಭೇಟಿಕೊಟ್ಟರು.

ಮೈತುಂಬ ಗಾಯಗಳಾಗಿದ್ದ ಆ ಸೈನಿಕ ಒಂದು ಮಂಚದ ಮೇಲೆ ನರಳುತ್ತ ಮಲಗಿದ್ದ. ಲಾಲ್‌ಬಹದ್ದೂರ್ ಶಾಸ್ತ್ರಿ ಅವರು ಆ ಮಂಚದ ಬಳಿ ಹೋದರು. ಆ ಸೈನಿಕ ತನ್ನ ಮಂಚದ ಬಳಿ ಬಂದು ನಿಂತ ಲಾಲ್‌ಬಹದ್ದೂರ್ ಶಾಸ್ತ್ರಿ ಅವರನ್ನು ಕಂಡು ಗಳಗಳನೆ ಅತ್ತುಬಿಟ್ಟ. ಆಗ ಶಾಸ್ತ್ರಿ ಅವರು "ಏಕೆ ಹೀಗೆ ಅಳುತ್ತಿರುವೆ? ನೀನು ಸೈನಿಕ. ನಮ್ಮ ದೇಶದ ಗಡಿ ಕಾಯಲು ಪ್ರಾಣದ ಹಂಗನ್ನು ಲೆಕ್ಕಿಸದೆ ಹೋರಾಡಿರುವ ವೀರ. ಹೀಗೆ ಅಳಬಾರದು" ಎಂದರು. ಅದಕ್ಕೆ ಆ ಸೈನಿಕ "ಸರ್, ನಾನು ನನಗಾಗಿರುವ ಗಾಯಗಳ ನೋವಿಗಾಗಲಿ, ನನ್ನ ಸಾವಿಗಾಗಗಲೀ ಅಳುತ್ತಿಲ್ಲ. ಆದರೆ ನನ್ನ ದೇಶದ ಪ್ರಧಾನಿಯೇ ನನ್ನ ಬಳಿ ಬಂದು ನಿಂತಿರುವಾಗ. ನಾನೊಬ್ಬ ಸೈನಿಕನಾಗಿ ಎದ್ದುನಿಂತು ನಿಮಗೆ ಸೆಲ್ಯೂಟ್ ಮಾಡಿ ಗೌರವ ಸಲ್ಲಿಸಲು ಸಾಧ್ಯವಾಗುತ್ತಿಲ್ಲವಲ್ಲಾ ಎಂದು ಅಳುತ್ತಿದ್ದೇನೆ" ಎಂದನಂತೆ!

ಆ ಸೈನಿಕನ ಮಾತು ಕೇಳಿ ಬಹುಶಃ ಪ್ರಧಾನಿ ಲಾಲ್‌ಬಹದ್ದೂರ್ ಶಾಸ್ತ್ರಿ ಅವರ ಕಣ್ಣಲ್ಲೂ ನೀರು ಬಂದಿರಬೇಕು. ಈ ಪ್ರಸಂಗ ಒಬ್ಬ ರಾಷ್ಟ್ರನಿಷ್ಠ ಸೈನಿಕನ ಶಿಸ್ತು ಎಂತಹುದು ಎಂಬುದಕ್ಕೆ ಒಂದು ಉದಾತ್ತ ನಿದರ್ಶನವಾಗಿದೆ. ದೇಶವನ್ನು ಆಳುವವರಿಗೆ ಲಾಲ್‌ಬಹದ್ದೂರ್ ಶಾಸ್ತ್ರಿ ಅವರಂತಹ ಮಾನವೀಯತೆ ಇರಬೇಕು. ದೇಶವನ್ನು ರಕ್ಷಿಸುವಂತಹ ಸೈನಿಕರಿಗೆ ಆ ಗಾಯಾಳು ಸೈನಿಕನಂತಹ ನಿಷ್ಠೆ ಇರಬೇಕು. ಈ ಎರಡೂ ಗುಣಗಳು ಯಾವುದೇ ರಾಷ್ಟ್ರದ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಇರಬೇಕು. ಮಕ್ಕಳು ಈ ಗುಣಗಳನ್ನು ತಾವು ಶಾಲೆಯಲ್ಲಿ ಕಲಿಯುವಾಗಲೇ ಮೈಗೂಡಿಸಿಕೊಳ್ಳಬೇಕು.

□□

## National Headquarters Appointments



**Sri Mohan Kumar Kondajji,** Headquarters Commissioner (S) for Projects, Bharat Scouts and Guides, Karnataka and Hon'ble Member of Karnataka Legislative Assembly is appointed as CONVENOR of Legislature Wing of the Bharat Scouts and Guides, National Association vide letter No. B.S.G./N.H.Q./D-1-49/867/2019-20. Dt.04/07/2019



**Sri Chinnaswamy Reddy,** Leader Trainer (S), Former State Secretary, Bharat Scouts and Guides, Karnataka is appointed as National Headquarters Commissioenr (Community Development Services) of the Bharat Scouts and Guides, National Association vide letter No. B.S.G./N.H.Q./D-1-13/869/2019-20. Dt. 04/07/2019

**- State Secretary**

# ರಾಜ್ಯ ಮಟ್ಟದ ಪುರಸ್ಕಾರ ಸಮಾರಂಭ

ಆಗಸ್ಟ್ 10 ರಂದು 2018-19ನೇ ಸಾಲಿನ್ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಯಲ್ಲಿ ಉತ್ತಮ ಅಂಕ ಗಳಿಸಿದ ಪ್ರತಿಭಾನ್ವಿತ ಹಾಗೂ "ಕರ್ನಾಟಕ ದರ್ಶನ" ಪ್ರಬಂಧ ಸ್ಪರ್ಧೆಯ ವಿಜೇತ ಸ್ಕೌಟ್ಸ್-ಗೈಡ್ಸ್‌ಗಳ 'ಪುರಸ್ಕಾರ ಸಮಾರಂಭ' ವನ್ನು ರಾಜ್ಯ ಕೇಂದ್ರ ಕಛೇರಿಯ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು.

ಈ ಸಮಾರಂಭದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಆಗಿ 32 ಸ್ಕೌಟ್ಸ್, 40 ಗೈಡ್ಸ್ ಹಾಗೂ ಪ್ರಬಂಧ ಸ್ಪರ್ಧೆಗೆ 6 ಸ್ಕೌಟ್ಸ್-ಗೈಡ್ಸ್ ವಿಜೇತರುಗಳು ಮತ್ತು ಸುಮಾರು 60 ಮಂದಿ ಪೋಷಕರು ಭಾಗವಹಿಸಿದ್ದರು.

ಶ್ರೀ ಬಿ.ಕೆ. ಬಸವರಾಜ, ರಾಜ್ಯ ಕಾರ್ಯದರ್ಶಿ (ಪ್ರ) ಇವರು ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತರು(ಗೈ)(ಪ್ರ) ಇವರು ಪ್ರಾಸ್ತಾವಿಕ ಭಾಷಣ ಮಾಡಿದರು.

ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಸ್ಕೌಟ್ ಕು॥ ಫಕೀರಪ್ಪ ಕಂಬಾರ, ಧಾರವಾಡ ಜಿಲ್ಲೆ ಹಾಗೂ ಗೈಡ್ ಕು॥ ಎಂ.ಎನ್. ಸ್ಫೂರ್ತಿ ದಾವಣಗೆರೆ ಜಿಲ್ಲೆ, ಸ್ಕೌಟ್ ಗೈಡ್‌ನ ಮಹತ್ವ ತಿಳಿಸಿ, ಸದರಿ ತರಬೇತಿ ಪಡೆಯುವುದರಿಂದ ಉತ್ತಮ ಅಂಕ ಗಳಿಸುವುದರ ಜೊತೆಗೆ ವ್ಯಕ್ತಿತ್ವ ರೂಪಿಸಿಕೊಳ್ಳಲು ಅನುಕೂಲವಾಗುತ್ತಿದೆ ಹಾಗು ಉದ್ಯೋಗ ಪಡೆಯಲು ಸಹ ಸ್ಕೌಟಿಂಗ್ ಮತ್ತು ಗೈಡಿಂಗ್ ತರಬೇತಿಯು ಜ್ಞಾನಾರ್ಜನೆಗೆ ಸಹಾಯ ಮಾಡುತ್ತದೆ ಎಂದರು. ಆದ್ದರಿಂದ ವಿದ್ಯಾರ್ಥಿಗಳೆಲ್ಲರೂ ಸ್ಕೌಟ್-ಗೈಡ್ ತರಬೇತಿ ಪಡೆಯಲು ದಾಖಲಾತಿ ಪಡೆಯುವಂತೆ ವಿದ್ಯಾರ್ಥಿಗಳಲ್ಲಿ ಮನವಿ ಮಾಡಿದರು. ಭಾವೈಕ್ಯತಾ ಗೀತೆಯನ್ನು ಸ್ಕೌಟ್ಸ್-ಗೈಡ್ಸ್‌ಗಳು ಹಾಡಿದರು.

ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಪ್ರೊ॥ ಓ. ಅನಂತರಾಮಯ್ಯ, ಸಂಸ್ಥಾಪಕರು ಮತ್ತು ಮಾಜಿ ಉಪಕುಲಪತಿಗಳು, ತುಮಕೂರು ವಿಶ್ವವಿದ್ಯಾಲಯ, ತುಮಕೂರು ಇವರು ಸಮಾರಂಭವನ್ನು ಉದ್ಘಾಟಿಸಿದರು. ಇವರು ಎಸ್.ಎಸ್.ಎಲ್.ಸಿ. ಹಾಗೂ ಪಿ.ಯು.ಸಿ. ಪರೀಕ್ಷೆಯಲ್ಲಿ ಸ್ಕೌಟ್ಸ್-ಗೈಡ್ಸ್‌ನಲ್ಲಿ ಶೇ. 95%, ಅದಕ್ಕಿಂತ ಹೆಚ್ಚಿನ ಅಂಕಗಳಿಸಿ ಉತ್ತಮ ಶ್ರೇಣಿಯಲ್ಲಿ ಪಾಸಾದ ವಿದ್ಯಾರ್ಥಿಗಳನ್ನು ಹಾಗೂ 'ಕರ್ನಾಟಕ ದರ್ಶನ' ಪ್ರಬಂಧ ಸ್ಪರ್ಧೆಯಲ್ಲಿ ವಿಜೇತರಾದವರನ್ನು ಉದ್ದೇಶಿಸಿ ಮಾತನಾಡಿ, ನಾವೆಲ್ಲಾ ನಮ್ಮ ತಂದೆ-ತಾಯಿಯರಿಗೆ, ನಮ್ಮ ಕುಟುಂಬ ಸದಸ್ಯರಿಗೆ ಯಾವ ರೀತಿ ಗೌರವ ತೋರುತ್ತೇವೆ, ಪ್ರೀತಿ-ವಿಶ್ವಾಸ ತೋರಿಸುತ್ತೇವೆ ಅದೇ ರೀತಿಯಲ್ಲಿ ವಿದ್ಯಾರ್ಥಿಗಳು ಗುರುಗಳಿಗೆ ಹಾಗೂ ಹಿರಿಯರಿಗೆ ಗೌರವ ನೀಡುವುದರ ಜೊತೆಗೆ ದೇಶಕ್ಕೆ ಮೊದಲ ಆಧ್ಯತೆ ನೀಡಿ ಗೌರವಿಸಬೇಕು. ನಾವೆಲ್ಲರೂ ಮನು ಕುಲದವರು. ಇಲ್ಲಿ ಎಲ್ಲಾ ಜಾತಿಯವರೂ ಒಂದೇ, ಮೇಲು ಕೀಳೆಂಬ ಭಾವನೆ ಇರಬಾರದು. ಜಾತೀಯತೆಯನ್ನು







ಕಿತ್ತೊಗೆಯಬೇಕು, ಆಗ ಮಾತ್ರ ನಾವು ಜೀವನದಲ್ಲಿ ಮುಂದೆ ಬರಲು ಸಾಧ್ಯ. ರಾಮಾಯಣ, ಮಹಾಭಾರತ, ಕಾದಂಬರಿಗಳು, ಮಹಾತ್ಮ ಗಾಂಧೀಜಿ, ಸ್ವಾಮಿ ವಿವೇಕಾನಂದ, ಡಾ॥ ಬಿ.ಆರ್. ಅಂಬೇಡ್ಕರ್ ಡಾ. ಎಂ. ವಿಶ್ವೇಶ್ವರಯ್ಯ ಇಂತಹ ಅನೇಕ ಗಣ್ಯರ ಜೀವನ ಚರಿತ್ರೆಗಳನ್ನು ಓದಿ, ಅವರ ತತ್ವ, ಶಿಸ್ತು, ಸಿದ್ಧಾಂತಗಳನ್ನು ತಿಳಿದುಕೊಂಡು ಅವರಂತೆಯೇ ಯುವಪೀಳಿಗೆಯವರಾದ ನೀವು ಅದನ್ನು ಚಾಚೂ ತಪ್ಪದೆ ಅಳವಡಿಸಿಕೊಂಡು ಆಚರಿಸಿದಲ್ಲಿ ಸದ್ಗುಣ ಸಂಪನ್ನರಾಗಿ ಜೀವನ ಸಾಗಿಸುತ್ತೀರ. ಈಗ ಗಳಿಸಿದ ಅಂಕಗಳಿಗಿಂತ ಇನ್ನೂ ಹೆಚ್ಚಿನ ಅಂಕಗಳನ್ನು ಮುಂದಿನ ತರಗತಿಗಳಲ್ಲಿ ಗಳಿಸಿ, ನಿಮ್ಮ ತಂದೆ ತಾಯಂದಿರಿಗೆ, ನಿಮ್ಮ ಊರಿಗೆ, ನಿಮ್ಮ ದೇಶಕ್ಕೆ ಗೌರವ ತರುವಲ್ಲಿ ಮುಂದಾಗಬೇಕು ಎಂದು ಸೂಚಿಸಿದರು.

ಇತ್ತೀಚಿನ ಆಧುನಿಕ ದಿನಗಳಲ್ಲಿ ವಿದ್ಯಾರ್ಥಿಗಳು ತಾಂತ್ರಿಕತೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳದೆ, ಅದರ ಪ್ರಯೋಜನ ಪಡೆದುಕೊಳ್ಳದೇ, ಉಪಯೋಗ ಪಡೆಯುವದಕ್ಕಿಂತ ಅದರ ದುರುಪಯೋಗ ಮಾಡಿಕೊಳ್ಳುವುದೇ ವಿದ್ಯಾರ್ಥಿಗಳಲ್ಲಿ ಹಾಗೂ ಯುವ ಜನತೆಯಲ್ಲಿ ಹೆಚ್ಚಾಗಿದೆ. ಉದಾಹರಣೆಗೆ ಮೊಬೈಲ್ ಬಳಕೆ, ವಾಟ್ಸ್ಯಾಪ್, ಫೇಸ್‌ಬುಕ್ ಇಂತಹ ಹಲವು ಸಾಮಾಜಿಕ ಜಾಲತಾಣಗಳ ಉಪಯೋಗ ಪಡೆಯುವುದರ ಬದಲು ದುರುಪಯೋಗ ಮಾಡಿಕೊಳ್ಳುವುದರಲ್ಲಿ ಮುಂದಾಗಿರುವುದನ್ನು ಬಿಟ್ಟು, ಒಳ್ಳೆಯ ಸಜ್ಜನರಾಗಿ ಬದುಕಿ ಬಾಳಿ ಆದರ್ಶ ವ್ಯಕ್ತಿಗಳಾಗಿರಿ, ನಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ, ನೀವು ಯಾವ ಭಾಷೆಯನ್ನಾದರೂ ಮಾತನಾಡಿ, ಯಾವ ಧರ್ಮವನ್ನಾದರೂ ಆಚರಿಸಿ ಅಡ್ಡಿಯಾಗಲಾರದು, ಆದರೆ ಕನ್ನಡವನ್ನು ಮರೆಯಬೇಡಿ. ಇದನ್ನು ಉಳಿಸಿ ಬೆಳೆಸಿ ಎಂದು ಮಕ್ಕಳನ್ನು ಪ್ರೋತ್ಸಾಯಿಸಿ ಅಭಿನಂದಿಸಿದರು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಉತ್ತರ ಅಮೇರಿಕಾದಲ್ಲಿ ಇತ್ತೀಚೆಗೆ ನಡೆದ 24ನೇ ಸ್ಕೌಟ್-ಗೈಡ್ ವಿಶ್ವ ಜಾಂಬೂರಿಯಲ್ಲಿ ತಾವು ಭಾರತ ತಂಡದ ನಾಯಕರಾಗಿ ಭಾಗವಹಿಸುದಲ್ಲದೇ, ವಿಶ್ವದ 150 ರಾಷ್ಟ್ರಗಳಿಂದ ಜಾಂಬೋರಿಯಲ್ಲಿ ಬಾಗವಹಿಸಿದ 45,000 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ವಿವಿಧ ದೇಶಗಳ ಪ್ರತಿನಿಧಿಗಳೊಂದಿಗೆ ಒಡನಾಟ ಹೊಂದುವದಲ್ಲದೆ, ಆ ದೇಶಗಳ ಅತ್ಯಂತ ಹಿರಿಯ ಅನುಭವಿ ರಾಷ್ಟ್ರೀಯ ನಾಯಕರೊಂದಿಗೆ ಸಮಾಲೋಚಿಸುವ ಅವಕಾಶದ ಅನುಭವಗಳನ್ನು ಪುರಸ್ಕೃತರಾದ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಭಾಗವಹಿಸಿದ ಪೋಷಕರು ಮತ್ತು ರಾಜ್ಯ ಸಂಸ್ಥೆ, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳೊಂದಿಗೆ ಹಂಚಿಕೊಂಡರು. ನಾವೆಲ್ಲ ಓದುತ್ತಿದ್ದ ಸಮಯದಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ ಶೇಕಡ 50 ಅಥವಾ 60 ಅಂಕ ಪಡೆವರೆ ನಮಗೆ ಮತ್ತು ಕುಟುಂಬ ವರ್ಗಕ್ಕೆ ಸಂತೋಷವಾಗುತ್ತಿತ್ತು. ಈ ಸಭೆಗೆ ಬಂದಿರುವ ಸ್ಕೌಟ್ಸ್-ಗೈಡ್ಸ್‌ಗಳು ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಯಲ್ಲಿ ಶೇಕಡ 95ಕ್ಕಿಂತ ಅದಿಕ ಅಂಕ ಗಳಸಿರುತ್ತೀರಿ. ಇದು ನೆನೆಸಿದಷ್ಟು ಸುಲಭದ ಕೆಲಸವಲ್ಲ. ಈ ಶ್ರಮ ಮೊದಲು ನಿಮ್ಮ ಪೋಷಕರಿಗೆ ಅನಂತರ ವಿದ್ಯಾರ್ಥಿಗಳ ಗುರುವೃಂದಕ್ಕೆ ಸಲ್ಲಬೇಕು. ಇವರ ಪ್ರೋತ್ಸಾಹವಿಲ್ಲದೇ ಯಾವುದೇ ವಿದ್ಯಾರ್ಥಿಗಳು ಮುಂದೆ ಬರಲು ಸಾಧ್ಯವಿಲ್ಲ. ಇಂದಿನ ಸನ್ಮಾನಕ್ಕೆ ನಿಮ್ಮ ಪೋಷಕರ ಪಾತ್ರ ಬಹಳ ಮಹತ್ವವಾದದ್ದು ಎಂದು ತಿಳಿಸಿ ಅಭಿನಂದಿಸಿದರು. ಕರ್ನಾಟಕ ಸರ್ಕಾರ ಹಾಗೂ ಭಾರತ ಸರ್ಕಾರದ ಕೆಲವು ಇಲಾಖೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ತರಬೇತಿ ಪಡೆದ ವಿದ್ಯಾರ್ಥಿಗಳಿಗೆ ಕೆಲ ಪರ್ಸೆಂಟೇಜ್ ಅಂಕಗಳನ್ನು ಮೀಸಲಿಡುತ್ತಿದ್ದಾರೆ. ಇದನ್ನು ಅಂಕಪಟ್ಟಿಗಳಲ್ಲಿ ಸಹ ನಮೂದಿಸಿ ವಿದ್ಯಾರ್ಥಿಗಳ ಮುಂದಿನ ಉದ್ಯೋಗಕ್ಕೆ ನೆರವಾಗಲು ಅನುವು ಮಾಡಿಕೊಡಲು ಪ್ರಯತ್ನಿಸಲಾಗುತ್ತಿದೆ. ಈಗಾಗಲೇ ಪೋಲೀಸ್ ಮತ್ತು ರೈಲ್ವೆ ಇಲಾಖೆಯ ನೇಮಕಾತಿಗಳಲ್ಲಿ ಸ್ಕೌಟ್ಸ್-

ಗೈಡ್ಸ್‌ನಲ್ಲಿ ಹೆಚ್ಚಿನ ತರಬೇತಾದ ವಿದ್ಯಾರ್ಥಿಗಳಿಗೆ ಅಂಕಗಳಲ್ಲಿ ಮೀಸಲಾತಿ ಕಲ್ಪಿಸಲಾಗಿದೆ. ಇದರಿಂದ ಹೆಚ್ಚಿನ ವಿದ್ಯಾರ್ಥಿಗಳು ಸಂಸ್ಥೆಯ ತರಬೇತಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವಂತೆ ಹಾಗೂ ತರಬೇತಿಗೆ ದಾಖಲಾತಿಗೆ ಸಹಕರಿಸುವಂತೆ ಕೋರಿದರು.

ಅತಿಥಿಗಳಾಗಿ ಭಾಗವಹಿಸಿದ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮಾತನಾಡಿ ಮಕ್ಕಳು ಬಾಲ್ಯದಲ್ಲಿ ಪಠ್ಯೇತರ ಚಟುವಟಿಕೆಯಲ್ಲಿ ಭಾಗವಹಿಸಿ ತಮ್ಮ ವ್ಯಕ್ತಿತ್ವ ರೂಪಿಸಿಕೊಳ್ಳಲು ತಿಳಿಸಿದರು. ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌ) ಇವರು ಮಕ್ಕಳನ್ನು ಮತ್ತು ಪೋಷಕರನ್ನು ಅಭಿನಂದಿಸಿದರು. ಹೆಚ್ಚಿನ ಸಂಖ್ಯೆಯಲ್ಲಿ ನಿಮ್ಮ ಕುಟುಂಬದ ಹಾಗೂ ನಿಮ್ಮ ಸುತ್ತಮುತ್ತಲಿನ ಪೋಷಕರ ಮಕ್ಕಳನ್ನು ಸ್ಕೌಟ್‌ಗೆ ದಾಖಲಿಸಲು ಮುಂದಾಗಿರಿ ಎಂದು ಕೋರಿದರು. ಶ್ರೀ ಬಿ.ಕೆ. ಬಸವರಾಜ, ರಾಜ್ಯ ಕಾರ್ಯದರ್ಶಿ(ಪ್ರ.) ಸಹಾಯಕ ರಾಜ್ಯ ಆಯುಕ್ತರುಗಳು ಹಾಗೂ ರಾಜ್ಯ ಸಂಸ್ಥೆ ಕೇಂದ್ರ ಸ್ಥಾನಿಕ ಆಯುಕ್ತರುಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

ಪ್ರಶಸ್ತಿ ಪ್ರಧಾನ ನಿರ್ವಹಣೆಯನ್ನು ಶ್ರೀ ಶೇಖ್ ಸೂರಣಗಿ, ರಾಜ್ಯ ತರಬೇತಿ ಆಯುಕ್ತರು (ಸ್ಕೌ) ಮತ್ತು ಶ್ರೀ ಕೃಷ್ಣರಾಜ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್) (ಪ್ರ) ಇವರು ನಡೆಸಿಕೊಟ್ಟರು.

ಸ್ಕೌಟ್ಸ್-ಗೈಡ್ಸ್‌ನಲ್ಲಿ ಉತ್ತಮ ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ' ಪ್ರಬಂಧ ಸ್ಪರ್ಧೆಯ ವಿಜೇತ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶ್ರೀ ಪಿ.ಜಿ.ಆರ್. ಸಿಂಧ್ಯ ಮತ್ತು ಪ್ರೊ. ಓ. ಅನಂತರಾಮಯ್ಯ ಮುಖ್ಯ ಅತಿಥಿಗಳು ಹಾಗು ಇತರರು ಪ್ರಮಾಣ ಪತ್ರ ಹಾಗೂ ಬಹುಮಾನವನ್ನು ವಿತರಿಸಿದರು.

ಶ್ರೀ ಪಿ. ಮಂಜುನಾಥಪ್ಪ ಹಾಗು ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತರು (ಪ್ರ) ಸಮಾರಂಭದ ಸಂಪೂರ್ಣ ಜವಾಬ್ದಾರಿ ನಿರ್ವಹಿಸಿದರು ಹಾಗೂ ಶ್ರೀ ಕೃಷ್ಣರಾಜ್, ಹೆಚ್.ಡಬ್ಲ್ಯೂ.ಬಿ. (ಸ್ಕೌ) ಶ್ರೀಮತಿ ವಿಜಯ ಕೃಪಾ ವಿಜೈ, ಎಲ್.ಟಿ. (ಗೈ) ಶ್ರೀ ಶೇಖ್ ಸುರಣಗಿ, ರಾಜ್ಯತರಬೇತಿ ಆಯುಕ್ತರು (ಸ್ಕೌ) (ಪ್ರ) ಶ್ರೀಮತಿ ಅರುಣಮಾಲಾ, ಶ್ರೀಮತಿ ಹೆಚ್.ಕೆ. ಜ್ಯೋತಿ, ರಾಜ್ಯತರಬೇತಿ ಆಯುಕ್ತರುಗಳು (ಗೈ)(ಪ್ರ) ಎ.ಎಸ್.ಸಿ.ಗಳಾದ ಶ್ರೀಮತಿ ಬಿ.ಡಿ. ಶಾಂತ, ಎಲ್.ಟಿ. (ಗೈ) ಎ.ಎಸ್.ಸಿ. ಶ್ರೀಮತಿ ಸುಶೀಲ ಚೆಂಗಪ್ಪ, ಶ್ರೀಮತಿ ರಾಧಾ ವೆಂಕಟೇಶ್, ಶ್ರೀ ಎಂ.ಎ. ಚೆಲ್ಲಯ್ಯ, ಬಿ.ಬಿ.ಎಂ.ಪಿ. ನೋಡಲ್ ಅಧಿಕಾರಿ ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ಉತ್ತರ ಜಿಲ್ಲೆ ಅವರುಗಳು ಸಮಾರಂಭದಲ್ಲಿ ಭಾಗವಹಿಸಿ ಯಶಸ್ವಿಗೊಳಿಸಿದರು.

ಶ್ರೀ ವಿಷ್ಣು, ಎಸ್.ಜಿ.ವಿ. ಹಾಗೂ ಕು॥ ಸುಮನ ಎಸ್.ಜಿ.ವಿ. ಇವರುಗಳು ಶಿಬಿರದ ನಾಯಕರಾಗಿ ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು. ಶ್ರೀ ಪಿ. ಮಂಜುನಾಥಪ್ಪ, ರಾಜ್ಯ ಸಂಘಟನಾ ಆಯುಕ್ತರು(ಪ್ರ) ಇವರು ವಂದನಾರ್ಪಣೆ ಸಲ್ಲಿಸಿದರು.

## ರಾಜ್ಯ ಮುಖ್ಯ ಆಯುಕ್ತರ ಜಿಲ್ಲೆಗಳ ಭೇಟಿ

**ಬೀದರ್:** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೀದರ 2019-20ನೇ ಸಾಲಿನ ಜಿಲ್ಲಾ ಪರಿಷತ್ ಸಭೆಯನ್ನು ದಿನಾಂಕ 21-08-2019 ರಂದು ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ಆಯೋಜಿಸಲಾಗಿದ್ದು, ಸಭೆಗೆ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರಾದ ಶ್ರೀ ಹೆಚ್. ಆರ್. ಮಹಾದೇವ ಅವರ ಸಮ್ಮುಖದಲ್ಲಿ ಮತ್ತು ಮಾನ್ಯ ರಾಜ್ಯ ಮುಖ್ಯ ಆಯುಕ್ತರಾದ ಪಿ. ಜಿ. ಆರ್. ಸಿಂಧ್ಯಾ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.



ಜಿಲ್ಲಾಧಿಕಾರಿಗಳಾದ ಶ್ರೀ ಹೆಚ್. ಆರ್. ಮಹಾದೇವ ಸ್ಕೌಟ್ಸ್ ಮತ್ತು ಗೈಡ್ ಸಂಸ್ಥೆಯ ಹಲವು ದಿನಗಳ ಬೇಡಿಕೆಯಾದ ತರಬೇತಿ ಕೇಂದ್ರಕ್ಕೆ 5 ಎಕರೆ ಜಾಗವನ್ನು ಗುರುತಿಸಲಾಗಿದ್ದು, ಅತಿ ಶಿಘ್ರದಲ್ಲಿ ಸಂಸ್ಥೆಗೆ ಹಸ್ತಾಂತರಿಸಲಾಗುವುದೆಂದು ತಿಳಿಸಿದರು. ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ ಇತ್ತೀಚಿನ ದಿನಗಳಲ್ಲಿ ನಮ್ಮ ರಾಜ್ಯ ಹಾಗೂ ದೇಶಗಳಲ್ಲಿ ನೆರೆ ಹಾವಳಿ, ಪ್ರಕೃತಿ ವಿಕೋಪಗಳು ಮೇಲಿಂದ ಮೆಲೆ

ಜರುಗುತ್ತಿದ್ದು, ಅವುಗಳ ನಿಯಂತ್ರಣಕ್ಕೆ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಒಂದು ಸೇನೆಯನ್ನು ರಚಿಸಿ, ಅವರುಗಳಿಗೆ ವಿಪತ್ತು ನಿರ್ವಹಣೆ ತರಬೇತಿಯನ್ನು ನೀಡಿ, ಸೇವೆಗೆ ಸಜ್ಜುಗೊಳಿಸಲಾಗುವುದುದೆಂದು ತಿಳಿಸಿದರು. ರಾಜ್ಯದಲ್ಲಿ 1 ಕೋಟಿ 25 ಲಕ್ಷ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಭಾಗವಹಿಸುವ ಅರ್ಹತೆಯುಳ್ಳ ವಿಧ್ಯಾರ್ಥಿಗಳಿದ್ದು, ಸದ್ಯ ಕೇವಲ 2.5 ಲಕ್ಷ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗೂ 30 ಸಾವಿರ ರೋವರ್ಸ್, ರೆಂಜರ್ಸ್‌ಗಳಿದ್ದಾರೆಂದು ತಿಳಿಸಿದರು. ಮುಂಬರುವ ದಿನಗಳಲ್ಲಿ ಬೀದರ ಜಿಲ್ಲೆಯ ಎಲ್ಲಾ ಶಾಲಾ-ಕಾಲೇಜುಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ಕಡ್ಡಾಯವಾಗಿ ಸ್ಥಾಪಿಸಲು ಮುತುವರ್ಜಿ ವಹಿಸುವಂತೆ ಮುಖ್ಯ ಆಯುಕ್ತರು ತಿಳಿಸಿದರು. ಸಭೆಯಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.



**ಯಾದಗಿರಿ:** ಆಗಸ್ಟ್ 22 ರಂದು ಯಾದಗಿರಿ ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಜಿಲ್ಲೆಯ ಸ್ಕೌಟ್ಸ್ ಹಾಗೂ ತಾಲೂಕು ಸಂಸ್ಥೆಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಸ್ಕೌಟ್ಸ್-ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಮಾತನಾಡಿದರು. ಜಿಲ್ಲಾ ಸಂಸ್ಥೆಯ ಜಿಲ್ಲಾ ತರಬೇತಿ ಕೇಂದ್ರಕ್ಕಾಗಿ 10 ಎಕರೆ ಜಮೀನು ಲಭ್ಯವಾಗುತ್ತಿದ್ದಂತೆ ಮುಂದಿನ ಕೆಲಸ ಕಾರ್ಯಗಳಿಗಾಗಿ 2ಕೋಟಿ ಅನುದಾನ ನೀಡುವುದಾಗಿ ಹೇಳಿದರು ಹಾಗು ಜಿಲ್ಲೆಯ ಸ್ಕೌಟ್-ಗೈಡ್ ಗಣತಿ, ತರಬೇತಿ ಮತ್ತು ಇತರ ಪ್ರಗತಿಪರ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿದರು. ಸಭೆಯಲ್ಲಿ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಳು ಭಾಗವಹಿಸಿದ್ದರು.

**ರಾಯಚೂರು:** ಆಗಸ್ಟ್ 24 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ರಾಯಚೂರು ಭೇಟಿ ನೀಡಿದಾಗ ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳ ಸಭೆಯನ್ನು ಕರೆಯಲಾಗಿತ್ತು. ಸಭೆಯನ್ನುದ್ದೇಶಿಸಿ ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ ವಿಭಾಗ ಮಟ್ಟದಲ್ಲಿ ರಾಯಚೂರು ಜಿಲ್ಲಾ ಸಂಸ್ಥೆಯು 2ಬಾರಿ ಪ್ರಥಮ ಸ್ಥಾನ ಪಡೆದಿದೆ. ಕಳೆದ ಸಾಲಿನಲ್ಲಿ ಪಡೆಯಲು ಸಾಧ್ಯವಾಗಲಿಲ್ಲ, ಮುಂದಿನ ದಿನಗಳಲ್ಲಿ ಆ ಸ್ಥಾನವನ್ನು ಪಡೆಯಬೇಕೆಂದು ತಿಳಿಸಿದರು. ಜಿಲ್ಲಾ ಸಂಸ್ಥೆಯಲ್ಲಿ ಇನ್ನು ಜಿಲ್ಲಾ ಪರಿಷತ್ ಸಭೆ ನಡೆದಿಲ್ಲ. ಅದನ್ನು ಕೂಡಲೇ ಮಾಡಬೇಕು ಎಂದು ತಿಳಿಸಿದರು. ನಂತರ ಖಾಲಿಯಿರುವ ಜಿಲ್ಲಾ ಕಾರ್ಯದರ್ಶಿ ಹುದ್ದೆ, ಜಿಲ್ಲಾ ಖಜಾಂಚಿ ಹಾಗೂ ಡಿ.ಓ.ಟಿ. ಹುದ್ದೆಗಳನ್ನು ಮುಂದಿನ ತಿಂಗಳಲ್ಲಿ ಸಭೆ ಕರೆದು ಜಿಲ್ಲೆ-ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳ ಅಭಿಪ್ರಾಯದ ಪ್ರಕಾರ ನೇಮಕ ಮಾಡಲಾಗುವುದು ಎಂದು ತಿಳಿಸಿದರು. ನಂತರ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳು 2019-20ನೇ ಸಾಲಿನಲ್ಲಿ ನಡೆದಿರುವ ಕಾರ್ಯಕ್ರಮಗಳನ್ನು ಹಾಗೂ ಕುಂದು ಕೊರತೆಗಳ ಬಗ್ಗೆ ಮುಖ್ಯ ಆಯುಕ್ತರಿಗೆ ಸವಿವರವಾಗಿ ತಿಳಿಸಿದರು.



ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಮುಖ್ಯ ಆಯುಕ್ತರು (ಪ್ರಭಾರಿ) ಶ್ರೀಮತಿ ಅಲಿಯಾ ಖಾನಂ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಬಸವರಾಜ ಬೋರೆಡ್ಡಿ, ಜಿಲ್ಲಾ ಆಯುಕ್ತರು(ಸ್ಕೌಟ್)ಶ್ರೀ ದೇವೇಂದ್ರ ಕಟ್ಟಿಮನಿ ಹಾಗೂ ಜಿಲ್ಲಾ ಮತ್ತು ಎಲ್ಲಾ ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳು ಸಭೆಯಲ್ಲಿ ಉಪಸ್ಥಿತರಿದ್ದರು.



**ಕೊಪ್ಪಳ:** ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿ ಕೊಪ್ಪಳ ಜಿಲ್ಲಾತರಬೇತಿಕೇಂದ್ರವು ಮೊಟ್ಟ ಮೊದಲಿಗೆ ಪ್ರಾರಂಭವಾಗಿದ್ದು ಇದು ಭಾರತ್ ಸ್ಕೌಟ್ ಮತ್ತು ಗೈಡ್ಸ್‌ಗಳಿಗೆ ಉತ್ತಮ ತರಬೇತಿ ಕೇಂದ್ರವಾಗಬೇಕು ಎಂದು ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಮುಖ್ಯ ಆಯುಕ್ತರು ತಿಳಿಸಿದರು.

ಆಗಸ್ಟ್ 23ರಂದು ಭಾರತ್ ಸ್ಕೌಟ್ ಮತ್ತು ಗೈಡ್ಸ್ ಜಿಲ್ಲಾ ಕೇಂದ್ರ ಕೊಪ್ಪಳಕ್ಕೆ ಆಗಮಿಸಿ ತರೇತಿ ಕೇಂದ್ರ ವೀಕ್ಷಿಸಿ ಅವರು ಮಾತನಾಡಿದರು. ತರಬೇತಿ ಕೇಂದ್ರದಲ್ಲಿ ಹೆಚ್ಚುವರಿ ಶೌಚಾಲಯ ನಿರ್ಮಾಣ, ತರಬೇತಿಕೇಂದ್ರದ ಸುತ್ತಲುತಡೆಗೋಡೆ ನಿರ್ಮಾಣ, ತರಬೇತಿಕೇಂದ್ರದಲ್ಲಿ ಹೆಚ್ಚುವರಿ ಕಟ್ಟಡ ನಿರ್ಮಾಣ ಸೇರಿದಂತೆ ತರಬೇತಿ ಕೇಂದ್ರಕ್ಕೆ ಕಾವಲುಗಾರರನ್ನು ನೇಮಿಸಲು, ತರಬೇತಿ ಕೇಂದ್ರದಲ್ಲಿ ಉತ್ತಮ ಪರಿಸರ ನಿರ್ಮಾಣಕ್ಕೆ ಉದ್ಯಾನವನ ನಿರ್ಮಿಸಲು ಸೂಚಿಸಿದರು. ಕಬ್ಸ್-ಬುಲ್ ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ, ಉಪಯುಕ್ತವಾದ ಆಟದ ಮೈದಾನವನ್ನು ನಿರ್ಮಿಸಲು, ಜಿಲ್ಲಾ ಸಂಸ್ಥೆ ವತಿಯಿಂದ ನಡೆಯುವ ಎಲಾ ತರಬೇತಿ ಚಟುವಟಿಕೆಗಳ ಬಗ್ಗೆ ಗಮನ ಹರಿಸಿ ರಾಜ್ಯದಲ್ಲಿ ಇರುವ ತರೆ ತರಬೇತಿ ಕೇಂದ್ರಗಳಿಗೆ ಮಾದರಿಯಾಗಬೇಕೆಂದು ನುಡಿದರು.

ತಾಲ್ಲೂಕು ಮಟ್ಟ ಹಾಗೂ ಜಿಲ್ಲಾ ಮಟ್ಟದಲ್ಲಿ ನಡೆದ ಚಟುವಟಿಕೆಗಳ ಬಗ್ಗೆ ಚರ್ಚೆ ನಡೆಸಿದ ಅವರು ರಾಜ್ಯ ಮಟ್ಟದ ಚಾರಣ ಶಿಬಿರ ಹಾಗು ಪಯೋನಿಯರಿಂಗ್ ಶಿಬಿರಗಳನ್ನು ಈ ತರಬೇತಿಕೇಂದ್ರದಲ್ಲಿ ಆಯೋಜಿಸಲು, ಜಿಲ್ಲಾ ಹಾಗೂ ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳಲ್ಲಿ ಬರುವ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಅನುದಾನವನ್ನು ಸಮರ್ಪಕವಾಗಿ ಬಳಸಿಕೊಳ್ಳುವಂತೆ ಹೇಳಿದರು.

ಪ್ರಸಕ್ತ ಸಾಲಿನ ರಾಜ್ಯ ಮಟ್ಟದ ಜಾಂಬೂರೇಟ್‌ನ್ನು ಈ ತರಬೇತಿ ಕೇಂದ್ರದಲ್ಲಿ ನಡೆಸಲು ಚರ್ಚಿಸಿದರು. ಕಾರ್ಯಕ್ರಮಕ್ಕು ಮೊದಲು ವಿಘ್ನೇಶ್ವರನಿಗೆ ಪೂಜಿಸಲಾಯಿತು. ಈ ಸಭೆಯಲ್ಲಿ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಳು ಭಾಗವಹಿಸಿದ್ದರು.



**ಬಳ್ಳಾರಿ:** ಆಗಸ್ಟ್ 24ರಂದು ಬಳ್ಳಾರಿ ಜಿಲ್ಲಾ ಸಂಸ್ಥೆಗೆ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್ ಸಿಂಧ್ಯಾ ಅವರು ಬೇಟಿ ನೀಡಿ ಜಿಲ್ಲಾ ಹಾಗು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳೊಂದಿಗೆ ಸಭೆ ನಡೆಸಿ ನೂತನವಾಗಿ ತಆಲೂಕುಗಳು ರಚನೆಯಾಗುವ ಬಗ್ಗೆ, ಪ್ರತಿಯೊಂದು ತಾಲೂಕಿನ ಗಣತಿ, ಚಟುವಟಿಕೆಗಳ ಬಗ್ಗೆ ಮುಂದಿನ ದಿನಗಳಲ್ಲಿ ಮಾಡುವಂತಹ ಕಾರ್ಯಚಟುವಟಿಕೆಗಳ ಬಗ್ಗೆ ಚರ್ಚಿಸಿದರು. ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ರಾಮ್‌ಪ್ರಸಾದ್ ವಿ. ಮನೋಹರ್ ಅವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ನೀಡಿರುವಂತಹ ಸಮವಸ್ತ್ರಗಳನ್ನು ಎಲ್ಲಾ ತಾಲೂಕು ಕಾರ್ಯದರ್ಶಿಗಳಿಗೆ ಮುಟ್ಟಿಸಲು ತಿಳಿಸಿದರು. ಸಭೆಯಲ್ಲಿ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಳು ಭಾಗವಹಿಸಿದ್ದರು.

**ಕಲಬುರಗಿ:** ಆಗಸ್ಟ್ 21 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಕಲಬುರಗಿಗೆ ಭೇಟಿ ನೀಡಿದಾಗ ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳ ಸಭೆಯನ್ನು ಕರೆಯಲಾಗಿತ್ತು. ಸಭೆಯನ್ನುದ್ದೇಶಿಸಿ ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ. ನಂತರ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳು 2019-20ನೇ ಸಾಲಿನಲ್ಲಿ ನಡೆದಿರುವ ಕಾರ್ಯಕ್ರಮಗಳನ್ನು ಹಾಗೂ ಕುಂದು ಕೊರತೆಗಳ ಬಗ್ಗೆ ಮುಖ್ಯ ಆಯುಕ್ತರಿಗೆ ಸವಿವರವಾಗಿ ತಿಳಿಸಿದರು. ಸಭೆಯಲ್ಲಿ ಈ ಕೆಳಗಂಡ ವಿಷಯಗಳನ್ನು ಚರ್ಚಿಸಲಾಯಿತು.




* ಜಿಲ್ಲೆಯಲ್ಲಿ ಎ.ಎಲ್.ಟಿ. ತರಬೇತಿ ಆದವರನ್ನು ಎಲ್.ಟಿ. ತರಬೇತಿಗೆ ಕಳುಹಿಸುವುದು.
* ಜಿಲ್ಲೆಯಲ್ಲಿ ಶಿಕ್ಷಕ-ಶಿಕ್ಷಕಿಯರಿಗೆ ಮೂಲ ತರಬೇತಿಗಳನ್ನು ಹಮ್ಮಿಕೊಳ್ಳುವ ಬಗ್ಗೆ.
* ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಕುಲಪತಿಗಳ ಅನುಮತಿಯೊಂದಿಗೆ ಪ್ರಾರಂಭಿಕ ಶಿಬಿರವನ್ನು ಮಾಡುವುದು.
* ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಿಗೆ ಸ್ಕೌಟ್-ಗೈಡ್ ಕಾರ್ಯಗಳನ್ನು ಕೈಗೊಳ್ಳಲು ವಾರದಲ್ಲಿ ಎರಡುದಿನ ಓ.ಓಡಿ ಎಂದು ಪರಿಗಣಿಸಿ ಶಿಕ್ಷಣ ಇಲಾಖೆಯಿಂದ ಆದೇಶ ನೀಡಲು ಸಹಕರಿಸುವುದು.
* ಜಿಲ್ಲೆಯ ದಾನಿಗಳಿಂದ ದೇಣಿಗೆಯನ್ನು ಸಂಗ್ರಹಿಸಿ ಬಡ ಮಕ್ಕಳಿಗೆ ಸ್ಕೌಟ್-ಗೈಡ್ ಸಮವಸ್ತ್ರಕ್ಕೆ ಬಳಸಿಕೊಳ್ಳುವುದು.
* ಪಂಚಾಯತ್ ವತಿಯಿಂದ ಗ್ರಾಮೀಣಾಭಿವೃದ್ಧಿ ಆದೇಶ ಪ್ರತಿ ತಿದ್ದುಪಡಿ ಮಾಡಿ ಪುನರ್ ಆದೇಶಿಸಿ ಕೊಡುವುದು.
* ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಪ್ರತಿಯೊಂದು ಗ್ರಾಮಗಳಿಗೆ ಬೇಟಿ ನೀಡಿ ಜಾಗೃತಿ ಮೂಡಿಸುವುದು.
* ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಸ್ಕೌಟ್-ಗೈಡ್ ರ್‍ಯಾಲಿ ಮಾಡುವುದು.
* ಮುಖ್ಯೋಪಧ್ಯಾಯರುಗಳಿಗೆ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವನ್ನು ಏರ್ಪಡಿಸುವುದು.
* ಅರಣ್ಯ ಇಲಾಖೆ ಅಧಿಕಾರಿಗಳನ್ನು ಭೇಟಿ ಮಾಡಿ ಅರಣ್ಯ ದರ್ಶನಕ್ಕೆ ಪ್ರತಿ ತಾಲ್ಲೂಕಿನಿಂದ 50ಮಕ್ಕಳನ್ನು ಅರಣ್ಯ ದರ್ಶನ ಮಾಡಲು ಅವಕಾಶ ಕಲ್ಪಿಸುವುದು.



# ಹೃದಯಪೂರ್ವಕ ಅಭಿನಂದನೆಗಳು
# Hearty Congratulations



**ಡಾ|| ಸಿ.ಎನ್. ಅಶ್ವಥ್‌ನಾರಾಯಣ್**
ಮಾನ್ಯ ಉಪಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗಳು
ಮತ್ತು ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



**ಶ್ರೀ ಎಸ್. ಸುರೇಶ್ ಕುಮಾರ್**
ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು
ಕರ್ನಾಟಕ ಸರ್ಕಾರ ಮತ್ತು
ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಇವರುಗಳಿಗೆ

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯಿಂದ**
ಶುಭಾಶಯಗಳನ್ನು ಕೋರುತ್ತೇವೆ.

# ರಾಜ್ಯ ಮಟ್ಟದ ಪಥಸಂಚಲನದ ತರಬೇತಿ ಶಿಬಿರ

ಸ್ವಾತಂತ್ರ ದಿನಾಚರಣೆಯ ಪಥ ಸಂಚಲನ ತರಬೇತಿಯು ಆಗಸ್ಟ್ 06 ರಿಂದ 15ರ ವರೆಗೆ ರಾಜ್ಯಕೇಂದ್ರ ಕಛೇರಿ ಶಾಂತಿಗೃಹದಲ್ಲಿ ಆಯೋಜಿಸಲಾಗಿದ್ದು ರಾಜ್ಯದ 26 ಜಿಲ್ಲೆಗಳಿಂದ 112 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಮತ್ತು ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್‌ಗಳ ಭಾಗವಹಿಸಿದರು.

ನಿವೃತ್ತ ಪೋಲಿಸ್ ಸಬ್‌ಇನ್ಸಪೆಕ್ಟರ್ ಶ್ರೀ ಕಲ್ಲಯ್ಯ ಹಾಗೂ ಶ್ರೀಮತಿ ಕೃಪಾ ವಿಜಯ್ ರವರ ನೇತೃತ್ವದಿಂದ, ಸ್ವಾತಂತ್ರ ದಿನಾಚರಣೆಯ ಪಥ ಸಂಚಲನಕ್ಕೆ ಮಕ್ಕಳನ್ನು ಆಯ್ಕೆ ಮಾಡಲಾಯಿತು. ಹಾಗೂ ಇನ್ನುಳಿದ ಮಕ್ಕಳಿಗೆ ಎರಡು ವಿಭಾಗಗಳಾಗಿ ಪಥಸಂಚಲನ ತರಬೇತಿ ನೀಡಲಾಯಿತು. ಆಗಸ್ಟ್ 9, 10 ಮತ್ತು 13ರಂದು ಆಯ್ಕೆಯಾದ ಮಕ್ಕಳಿಗೆ ಮಾಣಿಕ್‌ಷಾ ಪರೇಡ್ ಮೈದಾನಲ್ಲಿ ರಾಜ್ಯ ಮಟ್ಟದ ಸ್ವಾತಂತ್ರ್ಯೋತ್ಸವ ಪಥ ಸಂಚಲನಕ್ಕೆ ತರಭೇತಿ ನೀಡಲಾಯಿತು. ತರಬೇತಿ ಪಡೆದ ಮಕ್ಕಳು ಆಗಸ್ಟ್ 15 ರಂದು ರಾಜ್ಯ ಮಟ್ಟದ ಸ್ವಾತಂತ್ರ ದಿನಾಚರಣೆಯ ಪಥಸಂಚನದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯನ್ನು ಪ್ರತಿನಿಧಿಸಿದರು.



ಆಗಸ್ಟ್ 15 ರಂದು ಸಮಾರೋಪ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್ ಸಿಂಧ್ಯಾ ಅವರು ಅತಿಥಿಗಳಾಗಿ ಭಾಗವಹಿಸಿ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು ಹಾಗೂ ಶ್ರೀ ಕಲ್ಲಯ್ಯ, ನಿವೃತ್ತ ಪೋಲಿಸ್ ಸಬ್‌ಇನ್ಸ್‌ಪೆಕ್ಟರ್ ಇವರ ಮಾರ್ಗದರ್ಶನದಲ್ಲಿ ಉತ್ತಮ ಕವಾಯಿತು ತರಬೇತಿ ನೀಡಿದರು ಸ್ಕೌಟರ್ಸ್, ಗೈಡರ್ಸ್, ಮಕ್ಕಳು ಅತ್ಯಂತ ಉತ್ಸಾಹದಿಂದ ಭಾಗವಹಿಸಿ ತರಬೇತಿಯನ್ನು ಯಶಸ್ವಿಗೊಳಿಸಿದರು. ಸಹಕರಿಸಿದ ಶ್ರೀ ಕಲ್ಲಯ್ಯ ಶ್ರೀಮತಿ ಜಾನಕಿ ವೇಣುಗೋಪಾಲ್, ಶ್ರೀಮತಿ ಕೃಪಾ ವಿಜಯ್ ಶ್ರೀ ಮಂಜುನಾಥಪ್ಪ ಪಿ ಮತ್ತು ಶ್ರೀ ಕೃಷ್ಣರಾಜ್ ಇವರುಗಳಿಗೆ ಈ ಸಂದರ್ಭದಲ್ಲಿ ಗೌರವಿಸಲಾಯಿತು.

# ರಾಜ್ಯ ಕೇಂದ್ರ ಕಛೇರಿಯಲ್ಲಿ ಸ್ವಾತಂತ್ರ್ಯೋತ್ಸವ ದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಕೇಂದ್ರ ಕಛೇರಿಯಲ್ಲಿ ಆಗಸ್ಟ್ 15 ರಂದು 73ನೇ ಸ್ವಾತಂತ್ರ್ಯೋತ್ಸವ ಆಚರಿಸಲಾಯಿತು.

ಮುಖ್ಯ ಅತಿಥಿಗಳಾಗಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್ ಸಿಂಧ್ಯಾ ಅವರು ಭಾಗವಹಿಸಿ ರಾಷ್ಟ್ರ ಧ್ವಜಾರೋಹಣ ನೆರವೇರಿಸಿ ಸಂದೇಶವನ್ನು ನೀಡಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದರು ಹಾಗೂ ಶ್ರೀ ಬಿ.ಕೆ. ಬಸವರಾಜ್, ಜಂಟಿ ರಾಜ್ಯ ಕಾರ್ಯದರ್ಶಿ ಎಲ್ಲರನ್ನು ಸ್ವಾಗತಿಸಿದರು.

ಕರ್ನಾಟಕ ರಾಜ್ಯದ ಶ್ರೀ ಟಿ.ವಿ. ಶ್ರೀನಾಥ್ ಅವರು ಯುರೇಷಿಯಾ ರೀಜಿನಲ್ ನಿರ್ದೇಶಕರಾಗಿ ನೇಮಕವಾದ ಪ್ರಯುಕ್ತ ಅವರ ತಾಯಿ ಶ್ರೀಮತಿ ಜಾನಕಿ ವೇಣುಗೋಪಾಲ್ ಅವರನ್ನು ಸನ್ಮಾನಿಸಲಾಯಿತು. 24ನೇ ವಿಶ್ವ ಜಾಂಬೂರಿಯಲ್ಲಿ ಉತ್ತಮ ಸಾಧನೆ ತೋರಿಸಿರುವ ಬೆಂಗಳೂರು ದಕ್ಷಿಣದ ಸುಪ್ರಿತ್ ಬಾಲಾಜಿ, ರಾಘವನ್ ನಂಜಪ್ಪ, ಎಂ. ನಿಹಾರಿಕ. ಲಿಖಿತ ಹೆಚ್.ಪಿ. ಶೆಟ್ಟಿ, ಮನೀತ್ ಶಂಕರ್ ಇವರುಗಳನ್ನು ಗೌರವಿಸಲಾಯಿತು. ಕೇಂದ್ರ ಕಛೇರಿಯ ಎಲ್ಲಾ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು, ಜೊತೆಗೆ ಮಹಾರಾಣಿ ಕಾಲೇಜು, ಬಿ.ಬಿ.ಎಂ.ಪಿ ಮಕ್ಕಳು ಕಬ್ಸ್, ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸಿ ಕಾರ್ಯಕ್ರಮ ಯಶಸ್ವಿಯಾಗಿ ನೆರವೇರಿತು.



# ಜಿಲ್ಲಾ ವಾರ್ತೆಗಳು

**ಗುಲ್ಬರ್ಗಾ ಕೋಟೆ**

ಗುಲ್ಬರ್ಗಾ ಕೋಟೆ ಉತ್ತರ ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ ನಗರದಲ್ಲಿದೆ. 1347 ಅನಂತರದಲ್ಲಿ ಬಹಮನಿ ರಾಜವಂಶ ಅಲ್-ಉದ್ ಬಹಮನಿಯಿಂದ ಗಣನೀಯವಾಗಿ ವಿಸ್ತಾರಗೊಳಿಸಿದರು. ಅವರು ದೆಹಲಿ ಸುಲ್ತಾನರಿಂದ ತಮ್ಮ ಸಂಬಂಧಗಳನ್ನು ಕಡಿದುಕೊಂಡ ನಂತರ ಇಸ್ಲಾಮಿಕ್ ಸ್ಮಾರಕಗಳಾದ ಮಸೀದಿಗಳು ಅರಮನೆಗಳು, ಗೋರಿಗಳು ಮತ್ತು ಇತರ ನಿರ್ಮಿತಿಗಳ ನವೀಕರಿಸಿದ ಕೋಟೆಯನ್ನು ನಂತರ ನಿರ್ಮಿಸಲಾಯಿತು

## ಬೆಳಗಾವಿ

Bharat Scouts - Guides district association Belagavi and Southern Region C.A. Association Belagavi conducted the tree plantation and Swachha Bharat Abhiyan Programme at Yallur hill Belagavi Rural. 75 Scouts-Guides, Rovers participated. President Sri Jayakumar and others also participated in the programme.

* The Scouts & Guides of Jain heritage School along with their Director Ms. Shraddha Khatawate and teachers experienced a day out of the world this year, they got a chance to spend the day at the Maratha Ll Regimental Centre to appreciate and learn about the different aspects of life in the armed forces.

The visit began with a trip to the museum, which was an eye opener about the history of the armed forces, right from the British era to the present. The museum also displayed various arms and ammunitions and equipments used by the defence, which caught the attention of the Scouts and Guides.

The day continued with an interactive session with Lt.Col Manoj Shetty who gave an insightful audio visual aided presentation on the army with its different aspects, the Scouts and Guides were activiely asking and answering questions pertaining to the forces.



Ms. Shraddha Khatawate took the opportunity on behalf of Jain Heritage School to feclicitate Lt. Col. Manoj Shetty as a representative of the armed forces with a bouquet and a memento.

Towards the end of the programme the Scouts and Guides. offered handmade cards and flowers along with words of thanks to the soldiers with heartfelt gratitude and loud JAI HINDs.

* ಅಥಣಿ ತಾಲೂಕಿನ ಕೊಕಟನೂರು ನರ್ಸರಿಯಲ್ಲಿ 200 ಸ್ಕೌಟ್ಸ್-ಗೈಡ್ಸ್‌ಗಳಿಂದ ಬೀಜದ ಉಂಡೆ ತಯಾರಿ ಶಿಬಿರಕ್ಕೆ ಗ್ರಾಮಪಂಚಾಯತ ಅಧ್ಯಕ್ಷರಾದ ಶ್ರೀಮತಿ ಸವಿತಾ ಹೊನವಾಡಕರ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಬೀಜದುಂಡೆಗಳ ಮಹತ್ವದ ಬಗ್ಗೆ ವಲಯ ಅರಣ್ಯಾಧಿಕಾರಿ ಶ್ರೀ ಪ್ರಶಾಂತ ಗೌರಾಣಿ ಮಾರ್ಗದರ್ಶನ ಮಾಡಿದರು. ಒಟ್ಟು 10,000 ಬೀಜದ ಉಂಡೆಯನ್ನು ತಯಾರಿಸಲಾಯಿತು.

* ಸ್ಥಳೀಯ ಸಂಸ್ಥೆ ಕಾಗವಾಡ ವತಿಯಿಂದ ವಿಶ್ವ ಪರಿಸರ ದಿನಾಚರಣೆ ಹಾಗೂ ವಾರ್ಷಿಕ ಯೋಜನಾ ಪುಸ್ತಕ ಬಿಡುಗಡೆ ಮತ್ತು ದಳ ನವೀಕರಣ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು.

ಅಧ್ಯಕ್ಷತೆ ವಹಿಸಿ ಮಾತನಾಡಿದ ತಹಶೀಲ್ದಾರರಾದ ಶ್ರೀಮತಿ ಪರಿಮಳಾ ದೇಶಪಾಂಡೆ ಪರಿಸರ ಸಂರಕ್ಷಣೆ "ನಮ್ಮೆಲ್ಲರ ಹೊಣೆಯಾಗಿದೆ. ನಾವೆಲ್ಲರೂ ಮನೆಗೊಂದು ಮರ ನೆಡಬೇಕು ಮತ್ತು ನಮ್ಮ ನೆರೆಹೊರೆಯವರಿಗೂ ಪರಿಸರದ ಬಗ್ಗೆ ತಿಳಿಹೇಳಬೇಕು" ಎಂದರು.

ಈ ಕಾರ್ಯಕ್ರಮವನ್ನುದ್ದೇಶಿಸಿ ಮಾತನಾಡಿದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎ.ಎಸ್. ಜೋಡಗೇರಿ ಪ್ರತಿ ಮಕ್ಕಳು ಸ್ಕೌಟ್ಸ್-ಗೈಡ್ಸ್‌ನಲ್ಲಿ ಭಾಗವಹಿಸಬೇಕು ಎಂದರು.

* ಜುಲೈ 7 ರಂದು ಬೆಳಗಾವಿ ತಾಲೂಕಿನ ಯಾಳೂರಗಡ ಇಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಹಾಗೂ ಸಿತಾಸಾ ಸಂಸ್ಥೆ ಬೆಳಗಾವಿ ಇವರ ಸಹಯೋಗದೊಂದಿಗೆ ವನಮಹೋತ್ಸವ ಕಾರ್ಯಕ್ರಮದ ಅಂಗವಾಗಿ ಸಸಿ ನೆಡುವ ಕಾರ್ಯಕ್ರವನ್ನು ಮಾಡುವುದರೊಂದಿಗೆ ಸ್ವಚ್ಛ ಭಾರತ್ ಅಭಿಯಾನವನ್ನು ಹಮ್ಮಿಕೊಳ್ಳಲಾಯಿತು.

ದಕ್ಷಿಣ ಪ್ರಾಂತೀಯ ಲೆಕ್ಕ ಪರಿಶೋಧಕರ ಸಂಘದ ಅಧ್ಯಕ್ಷರಾದ ಶ್ರೀ ಜಯಕುಮಾರ ಪಾಟೀಲ, ಕಾರ್ಯದರ್ಶಿ, ಶ್ರೀ ನಿತಿನ್ ನಿಂಬಾಳಕರ, ಖಜಾಂಚಿ ಕಾರ್ಯಕ್ರಮದ ನಿರೂಪಕರಾದ, ಶ್ರೀ ರಾಹುಲ್ ಅಡಕೆ ಶಾಖೆಯ ಸಂಯೋಜಕರಾದ ಶ್ರೀ ಅನಂತ ಕುಲಕರ್ಣಿ, ಲೆಕ್ಕ ಪರಿಶೋಧಕರ ಸಂಸ್ಥೆಯ ಎಲ್ಲ ಪದಾಧಿಕಾರಿಗಳು, ಶ್ರೀ ಎಸ್.ಕೆ. ಘಟ್ಟದ ಶಿವಾನಂದ ಹಿರೇಮಠ ಮತ್ತು 75 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಕಾಗವಾಡ ತಾಲೂಕಿನ ಉಗಾರ ಬಿ.ಕೆ. ಗ್ರಾಮದಲ್ಲಿ ಕೃಷ್ಣಾ ನದಿ ಪ್ರವಾಹದಿಂದ ತೊಂದರೆಯಾದ ಜನರಿಗೆ ಗ್ರಾಮದ 4 ಕೇಂದ್ರಗಳಲ್ಲಿ ಗಂಜಿ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. ಕೆ.ಬಿ.ಎಸ್. ಯು.ಬಿ.ಎಸ್., ಜೆ.ಎಲ್.ಸಿ., ಜೆ.ಇ.ಟಿ., ಶಾಲೆಗಳಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ವಿ.ಎಸ್. ಜೋಡಗೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ದೈಹಿಕ ಶಿಕ್ಷಣದ ಪರಿವೀಕ್ಷಕರಾದ ಶ್ರೀ ಸಿ. ಎಂ. ಸಾಂಗ್ಲಿ ತಾಲೂಕದ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಎಂ.ಕೆ. ಕಾಂಬಳೆ, ಸ್ಕೌಟ್ ಮಾಸ್ಟರ್ ಗೈಡ್ ಕ್ಯಾಪ್ಟನ್‌ಗಳು ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಸದಸ್ಯರು ಗ್ರಾಮದ ಹಿರಿಯರು ಹಾಗೂ ಎಲ್ಲಾ ಶಾಲೆಯ ಪ್ರಧಾನ ಗುರುಗಳು ಭಾಗವಹಿಸಿ ಗಂಜಿ ಕೇಂದ್ರಕ್ಕೆ ಚಾಲನೆ ನೀಡಿದರು. ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯಿಂದ ಬಿಸ್ಕತ್ ಹಂಚಿಕೆ ಮಾಡಲಾಯಿತು. ಮತ್ತು ದನಕರುಗಳಿಗೆ ಮೇವು ನೀಡಲಾಯಿತು.



* ನಿಪ್ಪಾಣಿ, ಚಿಕ್ಕೋಡಿ, ಕಾಗವಾಡ, ರಾಯಬಾಗ, ಅಥಣಿ ತಾಲ್ಲೂಕುಗಳಲ್ಲಿ ಕೃಷ್ಣಾನದಿ ನೀರಿನಿಂದ ಉಂಟಾದ ಪ್ರವಾಹದಲ್ಲಿ ತೊಂದರೆಗೆ ಒಳಗಾದ ಜನರಿಗೆ ಸಹಾಯ, ಸೇವೆ, ಸಹಕಾರ ನೀಡಲು ಆಯಾ ತಾಲೂಕಿನ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿ ತಮಗೆ ಸಾಧ್ಯವಾದಷ್ಟು ಸೇವೆಯನ್ನು ಸಲ್ಲಿಸಿದ್ದಾರೆ. ಬೆಳಗಾವಿ ನಗರದ ಧರ್ಮನಾಥಭವನ ನೆಹರೂನಗರ, ಅಜಂ ನಗರದ ಅಂಬೇಡ್ಕರ್ ಭವನದಲ್ಲಿ ತಂಗಿದ್ದ ನಿರಾಶ್ರಿತರಿಗೆ ಊಟ-ಉಪಹಾರ ಬಡಿಸುವಲ್ಲಿ ಸೇವಾ ಕಾರ್ಯದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಎ.ಎಸ್.ಓ.ಸಿ., ಶ್ರೀ ಡಿ.ಬಿ. ಅತ್ತಾರ, ಶ್ರೀಮತಿ ಎಸ್.ಎಲ್. ಮಿರ್ಜಿ, ಸ್ಕೌಟ್ ಮಾಸ್ಟರುಗಳು, ಗೈಡ್ ಕ್ಯಾಪ್ಟನ್ನುಗಳು ಭಾಗವಹಿಸಿದ್ದರು. ಹುಕ್ಕೇರಿ ತಾಲೂಕಿನ ಸಂಕೆಪ್ಪರ ಸೇರಿದಂತೆ ವಿವಿಧ ಗ್ರಾಮಗಳಲ್ಲಿರುವ ನಿರಾಶ್ರಿತರ ಕೇಂದ್ರಗಳಿಗೆ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಪ್ರಭಾವತಿ ಪಾಟೀಲ ಹುಕ್ಕೇರಿ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳೊಂದಿಗೆ ತೆರಳಿ ಸಾಂತ್ವನದ ಮಾತುಗಳನ್ನು ಹೇಳಿ ಅವಶ್ಯವಿರುವ ವಸ್ತುಗಳನ್ನು ವಿತರಿಸಿದರು. ಇವರೊಂದಿಗೆ ಕಾರ್ಯದರ್ಶಿ



ಶ್ರೀ ಎಂ.ಬಿ. ಸನದಿ ಉಪಸ್ಥಿತರಿದ್ದರು. ನಿಪ್ಪಾಣಿ, ಚಿಕ್ಕೋಡಿ, ಕಾಗವಾಡ, ರಾಯಭಾಗ, ಅಥಣಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಸೇವೆ ಸಲ್ಲಿಸುವುದರೊಂದಿಗೆ ದಿನನಿತ್ಯ ಉಪಯೋಗಿ ವಸ್ತುಗಳನ್ನು ವಿತರಿಸುವ ಕಾರ್ಯದಲ್ಲಿ ತೊಡಗಿದ್ದರು. ಬೆಳಗಾವಿ ನಗರದ ಬಿ.ಕೆ. ಕಾಲೇಜಿನ ರೋವರ್‌ಗಳು ಎನ್.ಜಿ.ಓ ರೊಂದಿಗೆ ಭಾಗವಹಿಸಿ ನಗರದ ಹಾಗೂ ಬೇರೆ ಬೇರೆ ತಾಲ್ಲೂಕಿನ ಗಂಜಿ ಕೇಂದ್ರಗಳಿಗೆ ಊಟ ಉಪಹಾರಕ್ಕೆ ಸಂಬಂಧಿಸಿದ ದಿನಸಿ ಸಾಮಾನುಗಳನ್ನು, ಹಾಸಿಗೆ ಹೊದಿಕೆಗಳನ್ನು ವಿತರಿಸಲು ಸಹಕರಿಸಿದ್ದಾರೆ.



## ಬೆಂಗಳೂರು ಪೂರ್ವ

ಜುಲೈ 12 ರಿಂದ 14 ರ ವರೆಗೆ ಸೂರ್ಯಾಸಿಟಿಯ ಸುರಾನಾ ವಿದ್ಯಾಲಯ ಶಾಲೆಯಲ್ಲಿ ಜಿಲ್ಲಾ ಮಟ್ಟದ ತೃತೀಯ ಸೋಪಾನ್ ಸ್ಕೌಟ್ಸ್-ಗೈಡ್ಸ್, ತೃತೀಯ ಚರಣ್ ಕಬ್ಸ್, ಸ್ವರ್ಣಪಂಖ್ ಬುಲ್ ಬುಲ್ಸ್ ಹಾಗೂ ನಿಪುಣ್ ರೋವರ್ಸ್-ರೇಂಜರ್ಸ್ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಸ್ಕೌಟ್ ವಿಭಾಗಕ್ಕೆ ಯಾರಂಡಹಳ್ಳಿಯ ಬಿ.ಎಸ್. ಕಾರ್ಮೆಲ್ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ಅರುಣ್, ಗೈಡ್ ವಿಭಾಗಕ್ಕೆ ಬನ್ನೇರುಘಟ್ಟದ ಸ್ಕೂಲ್ ಆಫ್ ಇಂಡಿಯಾ ಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ಮೋನಾ ಮೆನೇಜ್, ಕಬ್ ವಿಭಾಗಕ್ಕೆ ಇಂಡ್ಲವಾಡಿ ಕ್ರಾಸಿನ ಸಾಯಿಸಿಟಿ ಇಂಟರ್‌ನ್ಯಾಷನಲ್ ಶಾಲೆಯ ಲೇಡಿ ಕಬ್ ಮಾಸ್ಟರ್ ಶ್ರೀಮತಿ ಮಂಜುಳ ಮತ್ತು ಬುಲ್ ಬುಲ್ ವಿಭಾಗಕ್ಕೆ ಜಿಗಣಿಯ ಎಸ್.ಆರ್.ಎಸ್. ವಿದ್ಯಾಮಂದಿರ ಶಾಲೆಯ ಫ್ಲಾಕ್ ಲೀಡರ್ ಶ್ರೀಮತಿ ಎ. ಭಾರತಿ ರವರು ಶಿಬಿರದ ನಾಯಕರುಗಳಾಗಿ ಕಾರ್ಯ ನಿರ್ವಹಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್ ಶಿಬಿರದ ಮೇಲುಸ್ತುವಾರಿ ವಹಿಸಿದ್ದರು. ಜಿಲ್ಲಾ ತರಬೇತಿ ಆಯುಕ್ತರುಗಳಾದ ಶ್ರೀಮತಿ ಕೆ.ವಿ. ವಸಂತಮ್ಮ, ಶ್ರೀ ಎ.ಎಂ. ಮಂಜುನಾಥ್, ಜಿಲ್ಲಾ ಖಜಾಂಚಿ ಶ್ರೀ ಸಿ. ಲಕ್ಷ್ಮೀಕಾಂತರಾಜು ಶಿಬಿರಕ್ಕೆ ಭೇಟಿ ನೀಡಿದರು. ಸುರಾನಾ ವಿದ್ಯಾಲಯದ ಗೈಡ್ ಕ್ಯಾಪ್ಟನ್ ಹಾಗೂ ಜಿಲ್ಲಾ ಬ್ಯಾಡ್ಜ್ ಕಾರ್ಯದರ್ಶಿ ಶ್ರೀಮತಿ ಸೌಮ್ಯ ಎ. ರೆಡ್ಡಿ ರವರು ಶಿಬಿರದ ಸಂಚಾಲಕರಾಗಿದ್ದರು.

* ಆಗಸ್ಟ್ 1 ರಂದು ಶಾಲೆಗಳ ಶಿಕ್ಷಕರಿಗೆ "ಪ್ರಾರಂಭಿಕ ಶಿಬಿರ" ಆನೇಕಲ್‌ನ ಸ್ಕೌಟ್ ಕಛೇರಿಯಲ್ಲಿ ಆಯೋಜಿಸಲಾಗಿತ್ತು.

ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎನ್. ಶಂಕರ ಮೂರ್ತಿ ರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಲೀಡರ್ ಟ್ರೈನರ್ ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಶಿಬಿರದ ನಾಯಕರಾಗಿದ್ದರು. ಜಿಲ್ಲಾ ತರಬೇತಿ



ಆಯುಕ್ತೆ ಶ್ರೀಮತಿ ಕೆ.ವಿ. ವಸಂತಮ್ಮ, ಸ್ಕೌಟರ್ ಶ್ರೀ ಎಂ. ನಟೇಶ್, ಗೈಡರ್ ಶ್ರೀಮತಿ ಅಶ್ವಿನಿ ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯ ನಿರ್ವಹಿಸಿದರು. ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಜುಲೈ 20 ರಂದು ಮರಸೂರಿನ ಸರ್ಕಾರಿ ಪ್ರೌಢಶಾಲಾ ಆವರಣದಲ್ಲಿ ಆನೇಕಲ್ ಸ್ಥಳೀಯ ಸಂಸ್ಥೆ ಮಟ್ಟದ ಗೀತಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು. ಮರಸೂರು ಗ್ರಾಮ ಪಂಚಾಯಿತಿ ಅಧ್ಯಕ್ಷ ಶ್ರೀ ಪ್ರಭಾಕರ್ ರೆಡ್ಡಿ, ಮಾಜಿ ಅಧ್ಯಕ್ಷ ಶ್ರೀ ಆರ್. ಪುರುಷೋತ್ತಮ್, ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಶ್ರೀ ಶಶಿಕಿರಣ, ಸರ್ಕಾರಿ ಪ್ರೌಢಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ವಿಮಲ, ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕ ಶ್ರೀ ಡಿ.ಎನ್. ವೀರಭದ್ರಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮೊದಲಾದವರು ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಕೆ. ಮೂರ್ತಿ, ಖಜಾಂಚಿ ಶ್ರೀ ಆರ್.ಎಲ್. ನಾರಾಯಣಸ್ವಾಮಿ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

* ಜುಲೈ 20 ರಂದು ಟಿ. ಗೊಲ್ಲಹಳ್ಳಿಯ ಕೆನರಾ ಗುರುಕುಲ ಪಬ್ಲಿಕ್ ಶಾಲಾ ಆವರಣದಲ್ಲಿ ಹೆಬ್ಬಗೋಡಿ ಸ್ಥಳೀಯ ಸಂಸ್ಥೆ ಮಟ್ಟದ ಗೀತಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು. ಶಾಲೆಯ ಸಂಸ್ಥಾಪಕ ಅಧ್ಯಕ್ಷರಾದ ಶ್ರೀ ರಾಜೇಶ್ ಜಿ. ನಾಯಕ್, ಸಿ.ಇ.ಓ. ಶ್ರೀ ಸುರೇಶ್ ಬೈಲೂರು ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್, ಸಹಾಯಕ ಜಿಲ್ಲಾ ಆಯುಕ್ತೆ ಶ್ರೀಮತಿ ಅರ್ಚನಾ ನಾರಾಯಣಸ್ವಾಮಿ, ಶಾಲಾ ಮುಖ್ಯ ಶಿಕ್ಷಕ ಶ್ರೀ ಮಹಂತೇಶ್ ರಾಜಗುರು ಮೊದಲಾದವರು ಉಪಸ್ಥಿತರಿದ್ದು ಬಹುಮಾನಗಳನ್ನು ವಿತರಿಸಿದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಪಿ. ಪ್ರಸನ್ನಕುಮಾರ್, ಖಜಾಂಚಿ ಶ್ರೀ ಡಿ.ಆರ್. ಮೋಹನ್‌ರಾವ್ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

* ಜುಲೈ 22 ರಂದು ಅತ್ತಿಬೆಲೆ ಸರ್ಕಾರಿ ಪ್ರೌಢಶಾಲಾ ಆವರಣದಲ್ಲಿ ಅತ್ತಿಬೆಲೆ ಸ್ಥಳೀಯ ಸಂಸ್ಥೆ ಮಟ್ಟದ ಗೀತಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು. ಜಿಲ್ಲಾ ಪಂಚಾಯಿತಿ ಮಾಜಿ ಸದಸ್ಯರು ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಕೆ. ಗೋಪಾಲಕೃಷ್ಣರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಮುಖಂಡರಾದ ಶ್ರೀ ಮಾಜಿ ರವಿ, ಜಿಲ್ಲಾ ಆಯುಕ್ತೆ (ಗೈಡ್) ಶ್ರೀಮತಿ ಎಂ. ವಿಜಯಲಕ್ಷ್ಮೀ, ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಕೆ.ವಿ. ವಸಂತಮ್ಮ ಮೊದಲಾದವರು ಉಪಸ್ಥಿತರಿದ್ದರು.



ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್, ಜಿಲ್ಲಾ ತರಬೇತಿ ಆಯುಕ್ತ ಶ್ರೀ ಎ.ಎಂ. ಮಂಜುನಾಥ್ ಮೊದಲಾದವರು ಉಪಸ್ಥಿತರಿದ್ದು, ಬಹುಮಾನಗಳನ್ನು ವಿತರಿಸಿದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಎನ್. ಪ್ರಭಾಕರ್, ಜಂಟಿ ಕಾರ್ಯದರ್ಶಿ ಶ್ರೀಮತಿ ಎ.ಎನ್. ಪ್ರಭಾವತಿ. ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

* ಜುಲೈ 19 ರಂದು ಹರಪನಹಳ್ಳಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಆವರಣದಲ್ಲಿ ಜಿಗಣಿ ಸ್ಥಳೀಯ ಸಂಸ್ಥೆ ಮಟ್ಟದ ಗೀತಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು.

ಉದ್ಘಾಟನಾ ಸಮಾರಂಭದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಜಗದೀಶ್, ತಾಲ್ಲೂಕು ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಕಾರ್ಯದರ್ಶಿ ಶ್ರೀ ಲಕ್ಷ್ಮೀಕಾಂತರಾಜು, ಸರ್ಕಾರಿ ನೌಕರರ ಸಂಘದ ಪ್ರತಿನಿಧಿ ಶ್ರೀ ಲಕ್ಷ್ಮೀಪತಿ ಮೊದಲಾದವರು ಉಪಸ್ಥಿತರಿದ್ದರು.

ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಭಾಗವಹಿಸಿ ಬಹುಮಾನಗಳನ್ನು ವಿತರಿಸಿದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಕೆ.ಟಿ. ಸ್ವಾಮಿ, ರಾಜ್ಯ ಗೈಡ್ ಪ್ರತಿನಿಧಿ ಶ್ರೀಮತಿ ಕೆ. ಪರಿಮಳ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

* ಜುಲೈ 24 ರಂದು ದೊಮ್ಮಸಂದ್ರ ಸರ್ಕಾರಿ ಹಿರಿಯ ಪ್ರಾಥಮಿಕ ಹೆಣ್ಣುಮಕ್ಕಳ ಪಾಠಶಾಲಾ ಅವರಣದಲ್ಲಿ ಸರ್ಜಾಪುರ ಸ್ಥಳೀಯ ಸಂಸ್ಥೆ ಮಟ್ಟದ ಗೀತಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು.

ಜಿಲ್ಲಾ ಸಂಸ್ಥೆ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್, ಸಹಾಯಕ ಜಿಲ್ಲಾ ಆಯುಕ್ತೆ ಶ್ರೀಮತಿ ಎಸ್.ಆರ್. ಮಮತಾ, ಮುಗಳೂರಿನ ಸಿ.ಆರ್.ಪಿ. ಶ್ರೀ ರಮೇಶ್ ಅರಾ ವಿದ್ಯಾ ನಿಕೇತನ ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ಶಶಿಕಲಾ ಮೊದಲಾದವರು ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಆರ್. ನಾರಾಯಣ್ ಹಾಗೂ ಸಹ ಕಾರ್ಯದರ್ಶಿ ಶ್ರೀ ಎನ್. ಅಶೋಕ್ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

* ಆಗಸ್ಟ್ 3 ರಿಂದ 4 ರ ವರೆಗೆ ಆನೇಕಲ್‌ನ ಸರಸ್ವತಿ ವಿದ್ಯಾಮಂದಿರ ಶಾಲೆಯ ಸುಮಾರು 170 ಸ್ಕೌಟ್-ಗೈಡ್ಸ್, ಕಬ್ಸ್-ಬುಲ್‌ಬುಲ್‌ಗಳು ಹಾಗೂ ಚಂದಾಪುರದ ಸ್ವಾಮಿ ವಿವೇಕಾನಂದ ಗ್ರಾಮಾಂತರ ಪದವಿಪೂರ್ವ ಕಾಲೇಜಿನ 25 ರೋವರ್ಸ್ ಮತ್ತು ರೇಂಜರ್ಸ್ ಕನಕಪುರ ತಾಲ್ಲೂಕಿನ ತಟ್ಟೇಕೆರೆಯ ಶ್ರೀ ಕಣಿವೆ ಮಹದೇಶ್ವರಸ್ವಾಮಿ ದೇವಾಲಯದ ಆವರಣದಲ್ಲಿ ಪರಿಸರ ಅಧ್ಯಯನ ಮತ್ತು ಅರಣ್ಯ ಚಾರಣ ಶಿಬಿರವನ್ನು ಹಮ್ಮಿಕೊಂಡಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಆರ್. ಮುನಿರಾಜು, ಗೈಡ್ ಕ್ಯಾಪ್ಟನ್ ಕು. ಶ್ರೇಯ ಎಸ್. ಬುಲ್ಲಾ, ಕಬ್ ಮಾಸ್ಟರ್ ಶ್ರೀ ಲಾರೆನ್ಸ್ ಪ್ರದೀಪ್, ಆರ್.ಎಸ್.ಎಲ್. ಶ್ರೀ ಅಮೋಘವರ್ಷ ಶಿಬಿರದ ನೇತೃತ್ವ ವಹಿಸಿದ್ದರು.



## ಬೆಂಗಳೂರು ಉತ್ತರ

ಜುಲೈ 27 ರಂದು ಶಿವಾಜಿನಗರ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಹೋಲಿ ಏಂಜಲ್ಸ್ ಹೈ.ಪ್ರೈ. ಶಾಲೆಯಲ್ಲಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಟಿ.ಎಸ್. ಲೂಕಾಸ್ ರವರ ನೇತೃತ್ವದಲ್ಲಿ ಬೀಜದುಂಡೆ ತಯಾರಿಕೆಯನ್ನು ಉದ್ಘಾಟನೆ ಮಾಡಲಾಯಿತು. ಶ್ರೀಮತಿ ಸುಶೀಲ ಚಂಗಪ್ಪ, ಎಲ್.ಟಿ.(ಗೈ)ರವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು.

ಸುಮಾರು 11 ಗಂಟೆಗೆ ಪಟಾಲಂ ನಾಯಕರ ಶಿಬಿರವನ್ನು ಏರ್ಪಡಿಸಲಾಗಿತ್ತು. ಸ್ಥಳೀಯ ಸಂಸ್ಥೆಯ ಶಾಲೆಗಳಿಂದ 180 ಕಬ್ಸ್-ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದು, ಈ ಶಿಬಿರದ ನಾಯಕರುಗಳಾಗಿ ಕಬ್ಸ್ ವಿಭಾಗಕ್ಕೆ ಶ್ರೀಮತಿ ಪರಿಮಳ, ಎಲ್.ಸಿ.ಎಂ., ಶ್ರೀಮತಿ ಬಿ. ರೇವತಿ ಎಲ್.ಟಿ.(ಬಿ.) ಸ್ಕೌಟ್ ವಿಭಾಗಕ್ಕೆ ಶ್ರೀ ಸಂದೀಪ್, ಗೈಡ್ ವಿಭಾಗಕ್ಕೆ ಶ್ರೀಮತಿ ಮೇರಿ ಅನ್‌ಬಂದಿರವರು ಕಾರ್ಯನಿರ್ವಹಿಸಿದರು.



ಸಂಜೆ ಸ್ಥಳೀಯ ಮಟ್ಟದ ಗೀತಗಾಯನ ಕಾರ್ಯಕ್ರಮವನ್ನು ಏರ್ಪಡಿಸಲಾಯಿತು. ಶ್ರೀಮತಿ ಗಾಯತ್ರಿ, ಶ್ರೀಮತಿ ಕುಸುಮ ಮತ್ತು ಶ್ರೀಮತಿ ಪ್ರಭಾರವರು ತೀರ್ಪುಗಾರರಾಗಿದ್ದರು.




## ಬೆಂಗಳೂರು ದಕ್ಷಿಣ

District Level Geetha Gayana Competition-2019 was held on August 17 at Bunt's Sangha RNS. Vidyaniketan, Vijayanagar, Bangalore. 9 Cubs, 13 groups of Scouts-Guides participated.

The Programme began at 9.30 a.m. Chief Guest Sri Madhukar M. Shetty Secretary of Bunts' Sangha Bangalore Inaugurated the programme

The Programme was inagurated by lighting the lamp Sri M.S. Sathish. District Secretary rendered the vote of thanks. The Judges were Mrs. Savitha, Mrs. G. Pushpavati and Mrs. Pooja.

Sri P.G.R. Sindhia, State Chief Commissioner was the Chief Guest of the Valedictory Function.

ಜೂನ್ 29 ರಂದು ವೈಟ್‌ಫೀಲ್ಡ್ ಸ್ಥಳೀಯ ಸಂಸ್ಥೆಯ ವತಿಯಿಂದ ಕೆ.ಕೆ. ಹೈಸ್ಕೂಲ್ ವರ್ತೂರ್, ಬೆಂಗಳೂರು ಇಲ್ಲಿ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಯಿತು. ಈ ಶಿಬಿರಕ್ಕೆ ಶ್ರೀ ಎಮ್.ಕೆ. ಖಾನ್ ಬೆಂಗಳೂರು ದಕ್ಷಿಣ ಜಿಲ್ಲೆಯ ಮುಖ್ಯ ಆಯುಕ್ತರು ನಾಯಕರಾಗಿದ್ದರು. ಇದೇ ಸಂದರ್ಭದಲ್ಲಿ 2019-20ನೇ ಸಾಲಿನ ರಾಜ್ಯ ಸಂಸ್ಥೆಯ ಯೋಜನಾ ಕಾರ್ಯಕ್ರಮ ಪುಸ್ತಕದ ಬಿಡುಗಡೆಯ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಶ್ರೀ ಜಿತೇಶ್ ಶೇಟ್ ಸಹಾಯಕ ರಾಜ್ಯ ಆಯುಕ್ತರು (ಸ್ಕೌ) ಶ್ರೀಮತಿ ಭಾರತೀ ಚಕ್ರವರ್ತಿ, ವೈಟ್‌ಫೀಲ್ಡ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ, ಶ್ರೀ ಜೆ. ಚಕ್ರವರ್ತಿ, ಜಿಲ್ಲಾ ಸ್ಥಾನೀಯ ಆಯುಕ್ತರು(ಸ್ಕೌ) ಶ್ರೀಮತಿ ಮಮತ, ಗೈಡರ್, ಶ್ರೀಮತಿ ಪುಷ್ಪಲತ, ಗೈಡರ್ ಶಿಬಿರದಲ್ಲಿ ಸಹಾಯಕರಾಗಿದ್ದರು. ಈ ಶಿಬಿರದಲ್ಲಿ 22 ಮಂದಿ ಶಿಬಿರಾರ್ಥಿಗಳು ಭಾಗವಹಿಸಿದ್ದರು.








* ಜುಲೈ 9 ರಂದು ವಿಲ್ಸನ್ ಗಾರ್ಡನ್ ಸ್ಥಳೀಯ ಸಂಸ್ಥೆಯವತಿಯಿಂದ ಆರ್.ವಿ. ಶಿಕ್ಷಕರ ಕಾಲೇಜು, ಜಯನಗರ, ಬೆಂಗಳೂರು ಇಲ್ಲಿ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಯಿತು. ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪ ಗೌಡರು ಮತ್ತು ಆರ್.ವಿ. ಕಾಲೇಜಿನ ಪ್ರಾಂಶುಪಾಲರು ಉದ್ಘಾಟನಾ ಕಾರ್ಯವನ್ನು ನೆರವೇರಿಸಿದರು. ಈ ಶಿಬಿರಕ್ಕೆ ಕೃಷ್ಣರಾಜಪುರಂ ಸ್ಥಳೀಯ ಸಂಸ್ಥೆ ಸ್ಕೌಟರ್ ಜಿ. ಸತೀಶ್ ಹೆ.ಡಬ್ಲ್ಯೂ.ಬಿ.(ಸ್ಕೌ)ರವರು ನಾಯಕರಾಗಿದ್ದರು. ಶಿಬಿರದಲ್ಲಿ 77 ಶಿಭಿರಾರ್ಥಿಗಳು ಭಾಗವಹಿಸಿದ್ದರು. ಶ್ರೀ ಚಂದ್ರು ಪಿ. ಜಿಲ್ಲಾ ಸಂಘಟಕರು ಶಿಬಿರಕ್ಕೆ ಭೇಟಿ ನೀಡಿದ್ದರು.

* ಜುಲೈ 25 ರಂದು ಜಿಲ್ಲಾ ಸಂಸ್ಥೆ ವತಿಯಿಂದ ಬೆಂಗಳೂರು ದಕ್ಷಿಣ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಸಂಸ್ಥೆಯ ಅಧಿಕಾರಿಗಳಿಗೆ ಒಂದು ದಿನದ ಮಾಹಿತಿ ಶಿಬಿರವನ್ನು ರಾಜ್ಯ ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮವನ್ನು ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌ) ಶ್ರೀ ಬಿ.ಕೆ. ಬಸವರಾಜ ಅವರು ಉದ್ಘಾಟಿಸಿದರು. ಶ್ರೀ ಸಲೀಂಪಾಷಾರವರು ಬೆಂಗಳೂರು ದಕ್ಷಿಣ ಜಿಲ್ಲೆ ವಲಯ-4 ರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾಹಿತಿ ಶಿಬಿರದಲ್ಲಿ ಭಾಗವಹಿಸಿದ ಅಧಿಕಾರಿಗಳನ್ನು ಉದ್ದೇಶಿಸಿ ಮಾತನಾಡಿದರು.



* ಜುಲೈ 30ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ದಕ್ಷಿಣ ವಲಯ-1, ವಲಯ-2 ರ ವ್ಯಾಪ್ತಿಯಲ್ಲಿನ ಶಾಲಾ ಶಿಕ್ಷಕರುಗಳಿಗೆ ಪ್ರಾರಂಭಿಕ ಶಿಬಿರವನ್ನು ಕೊಂಡಜ್ಜಿ ಬಸಪ್ಪ ಸಭಾಂಗಣ, ರಾಜ್ಯ ಕೇಂದ್ರ ಕಛೇರಿಯಲ್ಲಿ ಆಯೋಜಿಸಲಾಯಿತು. ಈ ಶಿಬಿರಕ್ಕೆ ಶ್ರೀ ಜಿ. ಚಕ್ರವರ್ತಿ ಎಲ್.ಟಿ. (ಸ್ಕೌ) ನಾಯಕರಾಗಿದ್ದರು. ಈ ಶಿಬಿರದಲ್ಲಿ 68 ಶಿಬಿರಾರ್ಥಿಗಳು ಭಾಗವಹಿಸಿದ್ದರು.

* ಆಗಸ್ಟ್ 6 ರಂದು ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ದಕ್ಷಿಣ ವಲಯ-3, ವಲಯ-4ರ ವ್ಯಾಪ್ತಿಯಲ್ಲಿನ ಶಾಲಾ ಶಿಕ್ಷಕರುಗಳಿಗೆ ಪ್ರಾರಂಭಿಕ ಶಿಬಿರವನ್ನು ಶ್ರೀ ಕೊಂಡಜ್ಜಿ ಬಸಪ್ಪ ಸಭಾಂಗಣ ರಾಜ್ಯ ಕೇಂದ್ರ ಕಛೇರಿ ಯಲ್ಲಿ ಆಯೋಜಿಸಲಾಯಿತು. ಈ ಶಿಬಿರವನ್ನು ಶ್ರೀ ಪಿ. ಪಳನಿ ರವರು ಬೆಂಗಳೂರು ದಕ್ಷಿಣ ಜಿಲ್ಲೆಯ ಸ್ಕೌಟ್ ಆಯುಕ್ತರು ಉದ್ಘಾಟಿಸಿದರು. ಈ ಶಿಬಿರಕ್ಕೆ ಶ್ರೀ ಜಿ. ಸತೀಶ್, ಕೆ.ಆರ್. ಪುರಂ ಸ್ಥಳೀಯ ಸಂಸ್ಥೆ, ನಾಯಕರಾಗಿದ್ದರು.

## ಬಾಗಲಕೋಟೆ

ಆಗಸ್ಟ್ 9ರಂದು ಬಾಗಲಕೋಟೆ ಜಿಲ್ಲೆಯ ಬಾಗಲಕೋಟ ತಾಲ್ಲೂಕಿನ ಯಡಹಳ್ಳಿಯ ಹೆಚ್.ಪಿ.ಎಸ್. ಶಾಲೆಯಲ್ಲಿ ತೆರೆದ ಗಂಜಿ ಕೇಂದ್ರಕ್ಕೆ ಭೇಟಿ ನೀಡಿ ಅವರಿಗೆ ಸಾಂತ್ವನ ಹೇಳಿದರು ಮತ್ತು ಉಪಹಾರವನ್ನು ಹಣ್ಣುಗಳು, ಬಿಸ್ಕತ್ತುಗಳು ಇತ್ಯಾದಿಗಳನ್ನು ಜಿಲ್ಲಾ ಪದಾಧಿಕಾರಿಗಳು ಮತ್ತು ಬಾಗಲಕೋಟೆ ಸ್ಥಳೀಯ ಪದಾಧಿಕಾರಿಗಳು ವಿತರಿಸಿದರು.

* ಆಗಸ್ಟ್ 10ರಂದು ಮುಧೋಲ ತಾಲ್ಲೂಕಿನ ಮುರಾರ್ಜಿ ವಸತಿ ಶಾಲೆ ಹೆಬ್ಬಾಳ ಗಂಜಿ ಕೇಂದ್ರ ನಂ. 1ಕ್ಕೆ ಭೇಟಿ ನೀಡಿ ಘಟಪ್ರಭಾ ಹಿನ್ನೀರಿನ ಪ್ರವಾಹದಿಂದ 180 ಕುಟುಂಬಗಳು ಮುಳುಗಡೆಯಾಗಿದ್ದವು. ಆ ಎಲ್ಲ ಕುಟುಂಬಗಳಿಗೆ ಸ್ಕೌಟ್ಸ್-ಗೈಡ್ಸ್‌ಗಳ ಸೇವೆಯನ್ನು ಸಲ್ಲಿಸಿದರು.





ನೆರೆ ಸಂತ್ರಸ್ತರಿಗೆ ಜಿಲ್ಲಾ ತಂಡದೊಂದಿಗೆ ಅವರಿಗೆ ಬಿಸ್ಕತ್ತುಗಳು ಹಣ್ಣುಗಳು ಮೂಲಭೂತ ವಸ್ತುಗಳನ್ನು ನೀಡಲಾಯಿತು.

ಜ್ಯೋತಿ ಶಾಲೆ ಕಸಬಾ ಜಂಬಗಿ ಗಂಜಿಕೇಂದ್ರ 2ರಲ್ಲಿ 18 ಕುಟುಂಬಗಳು ವಾಸವಾಗಿದ್ದಾರೆ. ಅವರಿಗೆ ಬೇಕಾದ ಮೂಲಭೂತ ವಸ್ತುಗಳನ್ನು ಜಿಲ್ಲಾ ಸಂಸ್ಥೆಯಿಂದ ಕೊಡಲಾಯಿತು. ಬಸವೇಶ್ವರ ಪ್ರೌಢಶಾಲೆ ಕಸಬಾ ಜಂಬಗಿ ಗಂಜಿಕೇಂದ್ರ 3ರಲ್ಲಿ ಸುಮಾರು 24 ಕುಟುಂಬಗಳು ವಾಸವಾಗಿದ್ದರು ಅವರಿಗೆ ಹಣ್ಣುಗಳು, ಬಿಸ್ಕತ್ತುಗಳು ಇತ್ಯಾದಿಗಳನ್ನು ಕೊಟ್ಟು ಅವರಿ ಸಾಂತ್ವನವನ್ನು ಹೇಳಲಾಯಿತು.

* ಆಗಸ್ಟ್ 16 ರಂದು ಜಿಲ್ಲಾ ಸಂಸ್ಥೆ ಬಾಗಲಕೋಟೆ ಗೈಡ್ಸ್ ವಿಭಾಗದಿಂದ ಸಾಶಿ ಮತ್ತು ಕಲಾದಗಿ ಸಂತ್ರಸ್ತರ ಪರಿಹಾರ ಕೇಂದ್ರಗಳಿಗೆ ಭೇಟಿ ನೀಡಿ ಅವರೊಂದಿಗೆ ಸಮಾಲೋಚನೆ ಮಾಡಿ ಅವರಿಗೆ ಅವಶ್ಯಕತೆಯುಳ್ಳ ಹಣ್ಣುಗಳು, ಬಿಸ್ಕತ್ತು,ಗಳು ಬ್ರೆಡ್, ಸಾಬೂನು, ಪೇಸ್ಟ್, ಕೊಬ್ಬರಿಎಣ್ಣೆ, ಮೇಣದಬತ್ತಿ, ಚೂಡಿದಾರ, ಟಿ–ಷರ್ಟ್ ಇತ್ಯಾದಿ ಅಗತ್ಯ ವಸ್ತುಗಳನ್ನು ಪದಾಧಿಕಾರಿಗಳಿಂದ ವಿತರಿಸಲಾಯಿತು.



## ಚಾಮರಾಜನಗರ

ಜುಲೈ 2ರಂದು ಕೊಳ್ಳೇಗಾಲ ತಾಲ್ಲೂಕಿನ ನ್ಯಾಷನಲ್ ಶಾಲೆಯಲ್ಲಿ ತಾಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಕೊಳ್ಳೆಗಾಲ ತಾಲೂಕಿನ ನೋಡಲ್ ಅಧಿಕಾರಿಗಳಾದ ಶ್ರೀ ಅರಸಶೆಟ್ಟಿ, ತಾಲೂಕು ದೈಹಿಕ ಶಿಕ್ಷಣ ಅಧಿಕಾರಿಗಳಾದ ಶ್ರೀ ಜೈರಾಜ್, ಜಿಲ್ಲಾ ಆಯುಕ್ತರಾದ ಶ್ರೀ ಷರಾಪ್ ಮಾದಪ್ಪ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರರವರು ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯ ಯೋಜನಾ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಸಮಾವೇಶದಲ್ಲಿ 37 ಶಿಕ್ಷಕ–ಶಿಕ್ಷಕಿಯರು ಹಾಜರಿದ್ದರು.

* ಜುಲೈ 3ರಂದು ಯಳಂದೂರು ಸ್ಥಳೀಯ ಸಂಸ್ಥೆಯ ಕಛೇರಿಯಲ್ಲಿ ಸ್ಥಳೀಯ ಮಟ್ಟದ ಸ್ಕೌಟರ್ಸ್–ಗೈಡರ್ಸ್ ಸಮಾವೇಶ ಆಯೋಜಿಸಲಾಗಿತ್ತು. ಈ ಸಮಾವೇಶದಲ್ಲಿ ಸ್ಕೌಟ್ಸ್–ಗೈಡ್ಸ್‌ನ 2019–20ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನಾ ಪುಸ್ತಕವನ್ನು ಬಿಡುಗಡೆ ಗೊಳಿಸಿ ಮಾತನಾಡಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ತಿರುಮಲಾಚಾರ್ ರವರು ಸ್ಥಳೀಯ ಮಟ್ಟದಲ್ಲಿ ಸ್ಕೌಟ್ಸ್–ಗೈಡ್ಸ್ ಚಟುವಟಿಕೆಗಳು ಇನ್ನೂ ಹೆಚ್ಚಿನ ಮಟ್ಟದಲ್ಲಿ ಆಗಬೇಕು ಇದಕ್ಕೆ ಸಂಬಂದಪಟ್ಟಂತೆ ತಾಲ್ಲೂಕಿನ ಶಿಕ್ಷಕ ಮತ್ತು ಶಿಕ್ಷಕಿಯರನ್ನು ಸ್ಕೌಟ್ಸ್–ಗೈಡ್ಸ್ ತರಬೇತಿಗೆ ನಿಯೋಜಿಸುವುದಾಗಿ ಭರವಸೆ ನೀಡಿದರು. ಸಮನ್ವಯ ಸಂಪನ್ಮೂಲ ಅಧಿಕಾರಿಗಳಾದ ಶ್ರೀ ಮಹೇಶ್ ಕುಮಾರ್ ರವರು ಪ್ರತಿಯೊಂದು ಶಾಲೆಯಲ್ಲಿಯೂ ಸಹ ಸ್ಕೌಟ್ಸ್–ಗೈಡ್ಸ್ ಘಟಕವನ್ನು ಸ್ಥಾಪಿಸಬೇಕು ಮತ್ತು ಇದರ ಉಪಯೋಗವನ್ನು ಪ್ರತಿಯೊಬ್ಬರು ಪಡೆದುಕೊಳ್ಳಬೇಕು ಎಂದು ಸಲಹೆ ನೀಡಿದರು. ಈ ಕಾರ್ಯಕ್ರಮದಲ್ಲಿ ಬಿ.ಆರ್.ಸಿ. ಶ್ರೀ ಸ್ವಾಮಿ ಪೊನ್ನಾಚಿ, ಶ್ರೀ ರವಿಕುಮಾರ್, ಬಿ.ಆರ್.ಪಿ. ಶ್ರೀಮತಿ ಡಿ. ರಾಧ, ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಂ.ವಿ. ರಾಮಚಂದ್ರ ಉಪಸ್ಥಿತರಿದ್ದರು.

* ಜುಲೈ 4ರಂದು ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆಯ ಸಭಾಂಗಣದಲ್ಲಿ ಜಿಲ್ಲಾ ಪ್ರಗತಿ ಪರಿಶೀಲನಾ ಸಭೆಯು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಬಿ. ಪರಾಫ್ ಮಾದಪ್ಪ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಸಭೆಗೆ ರಾಜ್ಯ ಸಂಸ್ಥೆಯ ವತಿಯಿಂದ ಶ್ರೀ ಬಿ.ಕೆ. ಬಸವರಾಜ ರಾಜ್ಯ ಜಂಟಿ ಕಾರ್ಯದರ್ಶಿ, ಶ್ರೀಮತಿ ಅರುಣಮಾಲ, ಸಹಾಯಕ ರಾಜ್ಯ

ತರಬೇತಿ ಆಯುಕ್ತರು, ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಖಜಾಂಚಿ ಮತ್ತು ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿ ಮೈಸೂರು ವೀಕ್ಷಕರಾಗಿ ಆಗಮಿಸಿದ್ದರು. ಈ ಸಭೆಯಲ್ಲಿ ರಾಜ್ಯ ಸಂಸ್ಥೆ ವತಿಯಿಂದ ನೀಡಲಾದ 2018-19 ಮತ್ತು 2019-20ನೇ ಸಾಲಿನ ಕಾರ್ಯಕ್ರಮಗಳ ವರದಿ, ಪ್ರಗತಿ, ನಿವೇಶನದ ಮಾಹಿತಿ, ಜಿಲ್ಲೆಯ ಮತ್ತು ಸ್ಥಳೀಯ ಸಂಸ್ಥೆಯ ಎಲ್ಲಾ ವಿವರಗಳನ್ನು ಪರಿಶೀಲನೆ ನಡೆಸಲಾಯಿತು.

* ಜುಲೈ 8ರಂದು ತಾಲ್ಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಪ್ಪಾರ ಬೀದಿಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶಿಕ್ಷಕರ ಸಂಘದ ಅಧ್ಯಕ್ಷರೂ ಮತ್ತು ಜಿಲ್ಲಾ ಸಂಸ್ಥೆಯ ಖಜಾಂಚಿಗಳು ಆಗಮಿಸಿದ್ದರು. ಈ ಸಭೆಯು ಶ್ರೀ ಬಿ. ಷರಾಫ್ ಮಾದಪ್ಪ ಜಿಲ್ಲಾ ಆಯುಕ್ತರು(ಸ್ಕೌ) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ ಮತ್ತು ಶ್ರೀಮತಿ ಪಿ. ಕಮಲಮ್ಮ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಸಿದ್ಧಲಿಂಗಮೂರ್ತಿ, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಕೆ.ಎಸ್. ಮಹಾದೇವಸ್ವಾಮಿ ಮತ್ತು ಜಿಲ್ಲಾ ಸಂಘಟಕರಾದ ಶ್ರೀ ಅಶೋಕ್ ಕುಮಾರ್ ಅವರು ಉಪಸ್ಥಿತರಿದ್ದರು. ರಾಜ್ಯ ಸಂಸ್ಥೆಯು ನೀಡಿದ ಯೋಜನಾ ಪುಸ್ತಕವನ್ನು ಬಿಡುಗಡೆ ಮಾಡಿ ಯೋಜನಾ ಪುಸ್ತಕದಲ್ಲಿರುವ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿ ಎಲ್ಲಾ ಶಾಲೆಗಳಲ್ಲಿ ಕಾರ್ಯಕ್ರಮಗಳನ್ನು ನಿಯೋಜನೆ ಮಾಡಬೇಕು ಎಂದು ಮನವಿ ಮಾಡಲಾಯಿತು.

* ಜುಲೈ 19 ರಿಂದ 23ರ ವರೆಗೆ ಶ್ರೀ ರಾಜರಾಜೇಶ್ವರಿ ಕಲ್ಯಾಣ ಮಂಟಪ, ಕೊಳ್ಳೇಗಾಲದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ತೃತೀಯ ಸೋಪಾನ್ ಕಬ್ ಗಳಿಗೆ ತೃತೀಯ ಚರಣ್ ಮತ್ತು ಬುಲ್‌ಬುಲ್‌ಗಳಿಗೆ ಸುವರ್ಣ ಪಂಕ್ ಪರೀಕ್ಷಾ ಶಿಬಿರ ಜರುಗಿತು. ಜೂನ್ 20ರಂದು ಸಸಿ ನೆಡುವ ಕಾರ್ಯಕ್ರಮ ಶ್ರೀ ಮಹಾದೇವಸ್ವಾಮಿ ಅರಣ್ಯಾಧಿಕಾರಿಗಳಿಂದ ಜರುಗಿತು. ಜೂನ್ 21ರಂದು ಪರಿಸರ ನೈರ್ಮಲ್ಯ ಕಾರ್ಯಕ್ರಮವನ್ನು ಮತ್ತು ಜಿಲ್ಲಾ ಮಟ್ಟದ ದೇಶಭಕ್ತಿ ಗೀತಗಾಯನ ಸ್ಪರ್ಧೆ ನಡೆಸಲಾಯಿತು. 22ರಂದು ಮುಕ್ತಾಯ ಸಮಾರಂಭದಲ್ಲಿ ಶ್ರೀ ಶಿವಕುಮಾರ್ ರವರು ಭಾಗವಹಿಸಿದ್ದರು. 23ರಂದು ಸರ್ವಧರ್ಮ ಪ್ರಾರ್ಥನೆ ಜರುಗಿತು. ಈ ಪರೀಕ್ಷಾ ಶಿಬಿರದ ಮೇಲುಸ್ತುವಾರಿಯನ್ನು ಶ್ರೀ ಬಿ. ಷರಾಫ್ ಮಾದಪ್ಪ, ಜಿಲ್ಲಾ ಆಯುಕ್ತರು ಸ್ಕೌಟ್ ಮತ್ತು ಕಾರ್ಯಕ್ರಮದ ಉಸ್ತುವಾರಿಯನ್ನು ಶ್ರೀ ವಿ.ಎಂ. ರಾಮಚಂದ್ರ ಜಿಲ್ಲಾ ಕಾರ್ಯದರ್ಶಿ ವಹಿಸಿದ್ದರು.

* ಜುಲೈ 21ರಂದು ಯಳಂದೂರು ತಾಲ್ಲೂಕು ಮಟ್ಟದ "ದೇಶಭಕ್ತಿ ಗೀತಗಾಯನ ಸ್ಪರ್ಧೆ ಕಾರ್ಯಕ್ರಮವನ್ನು" ಆಯೋಜಿಸಿದ್ದು ಈ ಕಾರ್ಯಕ್ರಮದಲ್ಲಿ ಶ್ರೀ ವೆಂಕಟರಮಣ ಶೆಟ್ಟಿರವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕೆ.ಎಸ್. ಮಹದೇವಸ್ವಾಮಿ, ಶ್ರೀ ಆಲ್ಬರ್ಟ್ ಆರೋಗ್ಯ ಸ್ವಾಮಿ, ಶ್ರೀಮತಿ ಕವಿತಾ ತೀರ್ಪುಗಾರರಾಗಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಅಮರನಾಥ, ಶ್ರೀಮತಿ ಬಸಂತಿ, ಶ್ರೀಮತಿ ಭಾಗ್ಯ ಭಾಗವಹಿಸಿದ್ದರು. ಯಳಂದೂರು ತಾಲ್ಲೂಕಿನ ವಿವಿಧ ಶಾಲೆಯ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಕಾರ್ಯಕ್ರಮದಲ್ಲಿ ಹಾಜರಿದ್ದರು. ಕಬ್ಸ್-ಬುಲ್‌ಬುಲ್ಸ್ ವಿಭಾಗದಲ್ಲಿ ಶಿವರಾಜು, ಎಸ್.ಡಿ.ವಿ.ಎಸ್. ಶಾಲೆ ಯಳಂದೂರು, ಸಂಧ್ಯಾ, ವೈ.ಆರ್. ಎಸ್.ಡಿ.ವಿ.ಎಸ್. ಶಾಲೆ ಯಳಂದೂರು, ಸ್ಕೌಟ್ಸ್-ಗೈಡ್ಸ್ ವಿಭಾಗದಲ್ಲಿ ಕಾರ್ತಿಕ್ ಪ್ರಿಯಮ್ ವಿ.ಜಿ.ಕೆ.ಕೆ. ಬಿಳಿಗಿರಿರಂಗನ ಬೆಟ್ಟ. ಶೀತಲ್ ಎಂ., ಎಸ್.ಡಿ.ವಿ.ಎಸ್. ಶಾಲೆ ಯಳಂದೂರು, ಪ್ರಥಮ ಸ್ಥಾನ ಪಡೆದುಕೊಂಡು ಜಿಲ್ಲಾ ಮಟ್ಟಕ್ಕೆ ಆಯ್ಕೆಯಾದರು.





## ಚಿಕ್ಕಮಗಳೂರು

Orientation Programme for the Scout Masters and Guide Captains was held on 19th July. The Programme began with watering the plants by Sri Ravish, Chairman of Bharat Scouts & Guides, Mudigere. Sri Shivananje Gowda, BRC, President Sri Maggalamakki Ganesh, Vice President Smt. Suchitra Prasanna, Vice President Sri Umesh, Trainers Sri Neelakantachar, Smt. Sandhya Rani, District Organiser Sri Naveen Kumar and Sri Kiran Kumar were present.

* The Geetha Gayana Competition was held on 26th July in J.C.'s Bhavan, Mudigere at the Taluk level. The President Sri Maggalmakki Ganesh, J.C., Secretary Sri Rajesh were present. Smt. Suchitra Prasanna ,Vice President, Sri Bakki Manjunatha, Sri Bakki Ravi were the judges of the programme.The total number of Scouts-Guides were 96. Eight Scout Masters and Four Guide Captains were present. In the Scout Section Jnanodaya School, Ilagula, bagged First prize, Bethany School, Bilagula School got Second Prize and HPS Daradahalli won Third Prizes. In the Guide Section Nalanda English Medium School got First, BGS Javali School, got Second and Bethany School Bilagula got Third Prizes.

* ಜುಲೈ 12 ರಂದು ಬೀಜದುಂಡೆ ತಯಾರಿಕೆ ಮತ್ತು ರಾಜ್ಯ ಪುರಸ್ಕಾರ ಪ್ರಶಸ್ತಿ ಪತ್ರ ವಿತರಣಾ ಕಾರ್ಯಕ್ರಮ ನಡೆಸಲಾಯಿತು.

ಸ್ವಚ್ಛಭಾರತ ಚಾರಿಟಬಲ್ ಟ್ರಸ್ಟ್ ಮತ್ತು ಅರಣ್ಯ ಇಲಾಖೆ ಸಹಯೋಗದೊಂದಿಗೆ ಬೀಜದುಂಡೆ ತಯಾರಿಕೆ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಶಾಲಾಕಾಲೇಜು ವಿದ್ಯಾರ್ಥಿಗಳು ಭಾವಹಿಸಿ ಸುಮಾರು 10,000 ಬೀಜದುಂಡೆಗಳನ್ನು ತಯಾರಿಸಿದರು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಅಪರ ಜಿಲ್ಲಾಧಿಕಾರಿಗಳು ಡಾ. ಕುಮಾರ್ ಮತ್ತು ಡಿ.ಆರ್.ಡಿ.ಎ. ಶ್ರೀ ಚಂದ್ರಶೇಖರರವರು ಆಗಮಿಸಿದ್ದರು. ಅರಣ್ಯಾಧಿಕಾರಿ ಶ್ರೀ ಕುಮಾರ್, ಅರಣ್ಯ ವಲಯ ಅಧಿಕಾರಿಗಳು ಶ್ರೀಮತಿ ಶಿಲ್ಪ, ಸ್ವಚ್ಛಭಾರತ ಚಾರಿಟಬಲ್ ಟ್ರಸ್ಟ್ ಅಧ್ಯಕ್ಷರು ಡಾ. ಶುಭಾವಿಜಯ್, ಉಪಾಧ್ಯಕ್ಷರು ಶ್ರೀ ಎಂ.ಎಲ್. ಮೂರ್ತಿ, ಕಾರ್ಯದರ್ಶಿ ಶ್ರೀ ನಟರಾಜ್ ಮತ್ತು ಪದಾಧಿಕಾರಿಗಳು ಮತ್ತು ಜಿಲ್ಲಾ ಸಂಸ್ಥೆಯ ಜಂಟಿ ಕಾರ್ಯದರ್ಶಿಗಳು ಶ್ರೀ ನೀಲಾಕಂಠಚಾರ್, ಜಿಲ್ಲಾ ಸಹಾಯಕ ಆಯುಕ್ತರು ಶ್ರೀಮತಿ ಮಮತ, ಜಿಲ್ಲಾ ತರಬೇತಿ ಆಯುಕ್ತರು ಶ್ರೀಮತಿ ಸಂಧ್ಯಾರಾಣಿ, ಜಿಲ್ಲಾ ಮತ್ತು ಸ್ಥಳೀಯ ಪದಾಧಿಕಾರಿಗಳು, ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಿಯರು ಭಾಗವಹಿಸಿದ್ದರು.

* 73ನೇ ಸ್ವಾತಂತ್ರ್ಯ ದಿನಾಚರಣೆ ಕಾರ್ಯಕ್ರಮವನ್ನು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಆಚರಿಸಲಾಯಿತು. ಮುಖ್ಯ ಅತಿಥಿಯಾಗಿ ಆಗಮಿಸಿದ ನಿವೃತ್ತ ಯೋಧ ಶ್ರೀರಘು ಅವರು ಧ್ವಜರಾರೋಹಣ ನೆರವೇರಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಎನ್. ಮಹೇಶ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಶಶಿಧರ, ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಮಮತಾ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಸಂಧ್ಯಾರಾಣಿ ಜಿಲ್ಲಾ ತರಬೇತಿ ಆಯಕ್ತರು ಶ್ರೀ ಕಿರಣ್, ಶ್ರೀ ನವೀನ್ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ಧ್ವಜಾರೋಹಣ ನೆರವೇರಿಸಿ ಮಾತನಾಡಿದ ನಿವೃತ್ತ ಯೋಧ ಶ್ರೀ ರಘು ಅವರು ಎಲ್ಲರಿಗೂ ಸ್ವಾತಂತ್ರ್ಯ ದಿನಾಚರಣೆ ಶುಭಾಷಯಗಳನ್ನು ತಿಳಿಸಿ, ಯೋಧರ ತ್ಯಾಗ





ಬಲಿದಾನ, ಸ್ವಾತಂತ್ರ್ಯ ಹೋರಾಟಗಾರರನ್ನು ಸ್ಮರಿಸಿದರು. ಇಂದಿನ ಮಕ್ಕಳಲ್ಲಿ ದೇಶಪ್ರೇಮ ಮೂಡಬೇಕು. ದೇಶಕ್ಕಾಗಿ ನಿಸ್ವಾರ್ಥ ಸೇವೆಯಲ್ಲಿ ತೊಡಗಿಸಿಕೊಳ್ಳಬೇಕು. ದೇಶದಲ್ಲಿ ಉತ್ತಮ ಪ್ರಜೆಯಾಗಿ ಭವಿಷ್ಯ ರೂಪಿಸಿಕೊಳ್ಳಬೇಕೆಂದು ತಿಳಿಸಿದರು.

* ಆಗಸ್ಟ್ 3 ರಂದು ಚಿಕ್ಕಮಗಳೂರು ತಾಲ್ಲೂಕಿನಲ್ಲಿ ಗೀತಗಾಯನ ಕಾರ್ಯಕ್ರಮ ಆಯೋಜಿಸಲಾಗಿತ್ತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಪಣಿರಾಜ ರವರು ವಹಿಸಿದ್ದರು. ಒಟ್ಟು ತಾಲ್ಲೂಕಿನ 25 ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿದ್ದವು. ಜಿಲ್ಲಾ ಸಂಸ್ಥೆಯ ಶ್ರೀ ಎನ್. ಮಹೇಶ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀಮತಿ ಮಮತಾ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀ ನೀಲಕಂಠಚಾರ್, ಜಂಟಿ ಕಾರ್ಯದರ್ಶಿ ತೀರ್ಪುಗಾರರಾಗಿ ಶ್ರೀ ಜಯಣ್ಣ, ಶ್ರೀಮತಿ ಮಮತಾ ಸುರೇಶ್ ಆಗಮಿಸಿದ್ದರು.

## ದಕ್ಷಿಣ ಕನ್ನಡ

ಜುಲೈ 12 ರಂದು ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಜಿಲ್ಲಾಡಳಿತ, ಮಂಗಳೂರು ಮಹಾನಗರ ಪಾಲಿಕೆ, ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರ, ಅರಣ್ಯ ಇಲಾಖೆ, ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ, ಜಿಲ್ಲಾ ರಾಷ್ಟ್ರೀಯ ಸೇವಾ ಯೋಜನೆ, ಮಂಗಳೂರು ವಿಶ್ವವಿದ್ಯಾನಿಲಯ ಇವರ ಸಂಯುಕ್ತ ಆಶ್ರಯದಲ್ಲಿ ಪ್ರಕೃತಿ ಸಂರಕ್ಷಣಾ ದಿನಾಚರಣೆ ಮತ್ತು ಜಿಲ್ಲಾ ಪರಿಸರ ಪ್ರಶಸ್ತಿ ಪ್ರದಾನ ಸಮಾರಂಭ ನೆರವೇರಿತು. ಬೆಳಿಗ್ಗೆ ಮಂಗಳ ಕ್ರೀಡಾಂಗಣದಿಂದ ಪರಿಸರ ಜಾಥದೊಂದಿಗೆ ಪ್ರಾರಂಭವಾಗಿ ಟಿ.ಎಮ್.ಪೈ ಸಭಾಭವನ. ಮಂಗಳೂರಿನಲ್ಲಿ ಪದ್ಮಶ್ರೀ ಪುರಸ್ಕೃತೆ ಸಾಲು ಮರದ ಶ್ರೀಮತಿ ತಿಮ್ಮಕ್ಕ ಅವರು ಸಮಾರಂಭವನ್ನು ಉದ್ಘಾಟಿಸಿ ಪ್ರಶಸ್ತಿ ಪ್ರದಾನ ಮಾಡಿದರು. ಕಾರ್ಯಕ್ರಮದಲ್ಲಿ ಮಂಗಳೂರು ನಗರದ ವಿವಿಧ ಶಾಲಾ-ಕಾಲೇಜುಗಳಿಂದ ಒಟ್ಟು 300 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಹಾಗು ಶಿಕ್ಷಕರು ಭಾಗವಹಿಸಿದ್ದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಜುಲೈ 13 ರಿಂದ 15ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳದಲ್ಲಿ ಜಿಲ್ಲಾ ಮಟ್ಟದ ರಾಜ್ಯ ಪುರಸ್ಕಾರ ರೋವರ್-ರೇಂಜರ್ ಪೂರ್ವಸಿದ್ಧತಾ ಶಿಬಿರವು ನಡೆಯಿತು. ಶಿಬಿರದಲ್ಲಿ 15 ರೋವರ್, 23 ರೇಂಜರ್‌ಗಳು ಭಗವಹಿಸಿದ್ದರು. ರೋವರ್ ವಿಭಾಗದ ನಾಯಕತ್ವವನ್ನು ರೋವರ್ ಸ್ಕೌಟ್ ಲೀಡರ್ ಶ್ರೀ ಪ್ರೀತೇಶ್, ರೇಂಜರ್ ವಿಭಾಗದ ನಾಯಕತ್ವವನ್ನು ವಿವೇಕಾನಂದ ಕಾಲೇಜು, ಪುತ್ತೂರಿನ ರೇಂಜರ್ ಲೀಡರ್ ಕು॥ ದೀಪಿಕಾ ವಹಿಸಿದ್ದರು.

* ಜುಲೈ 15ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಎನ್.ಜಿ. ಮೋಹನ್, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಸಂಘಟಕ, ಶ್ರೀ ಕೆ. ಭರತ್‌ರಾಜ್ ಇವರುಗಳು ಡಾ. ಸೆಲ್ವಮಣಿ, ಐ.ಎ.ಎಸ್., ಜಿಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ದಕ್ಷಿಣ ಕನ್ನಡ, ಶ್ರೀ ಸುಂದರ ಪೂಜಾರಿ, ಉಪನಿರ್ದೇಶಕರು (ಆಡಳಿತ) ದಕ್ಷಿಣ ಕನ್ನಡ ಇವರನ್ನು ಭೇಟಿಯಾಗಿ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಕಾರ್ಯ ಚಟುವಟಿಕೆ, ಸಂಸ್ಥೆಯ ಪ್ರಗತಿ ಜಿಲ್ಲಾ ತಾಲ್ಲೂಕು, ಗ್ರಾಮ ಪಂಚಾಯತ್ ಅನುದಾನ, ಬನ್ನಿ ತರಬೇತಿ ಶಿಬಿರಕ್ಕೆ ಶಿಕ್ಷಕರ ನಿಯೋಜನೆಯ ಬಗ್ಗೆ ಚರ್ಚಿಸಲಾಯಿತು. ಈ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯ 2019-20ನೇ ಸಾಲಿನ ಯೋಜನಾ ಪುಸ್ತಕವನ್ನು ನೀಡಲಾಯಿತು.

* ಜುಲೈ 16 ರಿಂದ 18 ರಂದು ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ, ಸ್ತ್ರೀ ಶಕ್ತಿ ಭವನ ಸುಳ್ಯ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಸುಳ್ಯ ಇದರ ಆಶ್ರಯದಲ್ಲಿ ನಡೆದ ಅಂಗನವಾಡಿ ಶಿಕ್ಷಕಿಯರ "ಬನ್ನಿ ಆಂಟಿ" ತರಬೇತಿ ಶಿಬಿರದ ಉದ್ಘಾಟನಾ ಸಮಾರಂಭವು ನಡೆಯಿತು. ಶ್ರೀ ಸುಂದರ ಪೂಜಾರಿ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಉಪಸ್ಥಿತರಿದ್ದು ಕಾರ್ಯಕ್ರಮ ಉದ್ಘಾಟಿಸಿ ಶುಭ ಹಾರೈಸಿದರು. ಡಾ. ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಸರಸ್ವತಿ, ಶಿಶು ಅಭಿವೃದ್ಧಿ ಯೋಜನಾಕಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ



ಇಲಾಖೆ, ಸುಳ್ಯ, ಶ್ರೀ ಲಕ್ಷ್ಮೀಶ ರೈ, ದೈಹಿಕ ಶಿಕ್ಷಣ ಪರಿವೀಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಸುಳ್ಯ, ಜಿಲ್ಲಾ ಪದಾಧಿಕಾರಿಗಳು. ಶ್ರೀಮತಿ ರವಿಶ್ರೀ, ಶ್ರೀಮತಿ ಶೈಲಜ ಮೇಲ್ವಿಚಾರಕರು ಸಿಡಿಪಿಓ ಕಛೇರಿ ಸುಳ್ಯ ಇವರು ಉಪಸ್ಥಿತರಿದ್ದರು. ಶ್ರೀ ಭರತ್‌ರಾಜ್ ಜಿಲ್ಲಾ ಸಂಘಟಕರು ಕಾರ್ಯಕ್ರಮವನ್ನು ನಿರೂಪಿಸಿದರು. 68 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಶ್ರೀಮತಿ ಛಾಯಾ ಮತ್ತು ಶ್ರೀಮತಿ ಜಯಶ್ರೀ ಎಲ್.ಟಿ.(ಗೈ) ನಾಯಕರಾಗಿದ್ದರು. ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಶ್ರೀಮತಿ ಕೆ.ಕೆ. ಲೀಲಾ, ನಿವೃತ್ತ ರಾಜ್ಯ ತರಬೇತಿ ಆಯುಕ್ತರು ಆಗಮಿಸಿ ಎಲ್ಲರಿಗೂ ಶುಭ ಹಾರೈಸಿದರು.

* ಜುಲೈ 23 ರಂದು ಹೂಹಾಕುವಕಲ್ಲು ಪ್ರಾಥಮಿಕ ಶಾಲಾ ಸಭಾಂಗಣದಲ್ಲಿ ಪ್ರಾರಂಭಿಕ ಶಿಬಿರ ನಡೆಸಲಾಯಿತು. ಅಧ್ಯಕ್ಷತೆಯನ್ನು ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಂ. ರಾಮರಾವ್ ವಹಿಸಿದ್ದರು. ವೇದಿಕೆಯಲ್ಲಿ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರು, ಸಂಸ್ಥೆಯ ಆಜೀವ ಸದಸ್ಯರಾದ ಶ್ರೀ ನವೀನ್ ಚಂದ್ರ, ಮುಖ್ಯ ಶಿಕ್ಷಕಿ ಜೋಯ್ಸ್ ಕುವೆಲ್ಲೊ ಉಪಸ್ಥಿತರಿದ್ದರು.

ಸಂಸ್ಥೆಯ ಕೋಶಾಧಿಕಾರಿಯವರು ಸ್ವಾಗತಿಸಿದರು. ಶಿಬಿರವನ್ನು ಹೂಹಾಕುವಕಲ್ಲು ಸಮೂಹ ಸಂಪನ್ಮೂಲ ವ್ಯಕ್ತಿ ಶ್ರೀಮತಿ ಆಶಾರವರು ಉದ್ಘಾಟಿಸಿದರು. ಇರಾ ಸಮೂಹ ಸಂಪನ್ಮೂಲ ವ್ಯಕ್ತಿ ಶ್ರೀಮತಿ ರೋಹಿಣಿ ಸಮಯೋಚಿವಾಗಿ ಮಾತನಾಡಿದರು. ಶ್ರೀ ಎಂ. ರಾಮ್‌ರಾವ್ ಶಿಬಿರ ನಾಯಕರಾಗಿ ಸಹಕರಿಸಿದರು.

ಸಂಜೆ 3.30ಕ್ಕೆ ಸಮಾರೋಪ ಸಮಾರಂಭ ನಡೆಸಲಾಯಿತು. ಶಿಬಿರಾರ್ಥಿಗಳಲ್ಲಿ ಶ್ರೀ ನಾಗರಾಜ ಖಾರ್ವಿ ಹಾಗೂ ಶ್ರೀಮತಿ ಪ್ರೇಮಕ್ಕ ರವರು ಮಾತನಾಡಿದರು. ಒಟ್ಟು 16 ಮಂದಿ ಭಾಗವಹಿಸಿದ್ದರು.

* ಜುಲೈ 27 ರಂದು ಉಳ್ಳಾಲ ಸ್ಥಳೀಯ ಸಂಸ್ಥೆಯ ವತಿಯಿಂದ, ದ.ಕ. ಜಿ.ಪಂ. ಹಿ.ಪ್ರಾ. ಶಾಲೆ ಬೆಳ್ಮದೋಟದಲ್ಲಿ ಎಸ್.ಡಿ.ಎಂ.ಸಿ., ಅಧ್ಯಕ್ಷರಾದ ಶ್ರೀ ಉಮರ್ ಫಾರೂಕ್ ಅಧ್ಯಕ್ಷತೆಯಲ್ಲಿ ವನಮಹೋತ್ಸವದ ಉದ್ಘಾಟನೆ ಹಾಗೂ ಮಾಹಿತಿ ಶಿಬಿರ ಕಾರ್ಯಕ್ರಮವು ನಡೆಯಿತು. ವೇದಿಕೆಯಲ್ಲಿ ಬೆಳ್ಮ ಪಂಚಾಯತ್ ಉಪಾಧ್ಯಕ್ಷರಾದ ಶ್ರೀ ಅಬ್ದುಲ್ ಸತ್ತಾರ್, ಮೊರಾರ್ಜಿ ದೇಸಾಯಿ ಹೆಣ್ಮಕ್ಕಳ ವಸತಿ ಶಾಲೆಯ ಪ್ರಾಂಶುಪಾಲರಾದ ಶ್ರೀ ಮಹಾಬಲೇಶ್ವರ ನಾಯಕ್,



ದೇರಳಕಟ್ಟೆ ಸಿ.ಆರ್.ಪಿ., ಶ್ರೀಮತಿ ರಾಜೇಶ್ವರಿ, ಶಾಲಾ ಮುಖ್ಯ ಶಿಕ್ಷಕರಾದ ಶ್ರೀಮತಿ ಸರೋಜ ಉಪಸ್ಥಿತರಿದ್ದರು. ಪಂಚಾಯತ್ ಉಪಾಧ್ಯಕ್ಷರು ಗಿಡಕ್ಕೆ ನೀರುಣಿಸುವ ಮೂಲಕ ಉದ್ಘಾಟನೆಯನ್ನು ನೆರವೇರಿಸಿದರು. ಕಾರ್ಯದರ್ಶಿ ಎಲ್ಲರನ್ನು ಸ್ವಾಗತಿಸಿದರು. ಶಾಲೆಯ ಸ್ಕೌಟರ್ ಶ್ರೀ ಉದಯ ಕುಮಾರ್ ವಂದನಾರ್ಪಣೆ ಗೈದರು. ಸಹಕಾರ್ಯದರ್ಶಿ ಶ್ರೀ ಪ್ರತೀಪರು ಕಾರ್ಯಕ್ರಮವನ್ನು ನಿರೂಪಿಸಿದರು. ಶಾಲೆಯ ಪರಿಸರದಲ್ಲಿ ಗಿಡಗಳನ್ನು ನೆಡಲಾಯಿತು.

* ಬೆಳ್ತಂಗಡಿ ಸ್ಥಳೀಯ ಸಂಸ್ಥೆ ಮತ್ತು ರೋಟರಿ ಕ್ಲಬ್ ಇವರ ಜಂಟಿ ಆಶ್ರಯದಲ್ಲಿ ಸ್ಕಾರ್ಫ್ ಡೇ ಹಾಗೂ ಕೆಸರ್‌ಡೊಂಜಿ ದಿನ ಕಾರ್ಯಕ್ರಮವನ್ನು ಎಸ್.ಡಿ.ಎಂ. ಆಂಗ್ಲಮಾಧ್ಯಮ ಶಾಲೆ, ಬೆಳ್ತಂಗಡಿಯಲ್ಲಿ ಆಚರಿಸಲಾಯಿತು. ಕಾರ್ಯಕ್ರಮದ ಉದ್ಘಾಟನೆಯನ್ನು ಎಸ್.ಡಿ.ಎಂ. ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲರಾದ ಶ್ರೀ ಮನ್ ಮೋಹನ್ ನಾಯಕ್ ನೆರವೇರಿಸಿ ಮಾತನಾಡುತ್ತಾ ಶಿಸ್ತಿನ ನಾಗರಿಕನಾಗಲು ಸ್ಕೌಟ್-ಗೈಡ್ ಒಂದು ಒಳ್ಳೆಯ ಚಳುವಳಿ ಹಾಗೆಯೇ ಭವಿಷ್ಯದಲ್ಲಿ ಈ ಚಳುವಳಿಗಳಿಂದ ತಮ್ಮ ಉತ್ತಮ ಯಶಸ್ಸಿನ ಬದುಕನ್ನು ಕಾಣಲು ಸಾಧ್ಯವೆಂದು ತಿಳಿಸಿದರು. ಕಾರ್ಯಕ್ರಮದ ನಂತರ ಸ್ಥಳೀಯ ಕಾಲೇಜಿನ ರೋವರ್-ರೇಂಜರ್‌ಗಳಿಗೆ ಕೆಸರು ಗದ್ದೆಯಲ್ಲಿ ಹಗ್ಗ-ಜಗ್ಗಾಟ, ಓಟ ಇತ್ಯಾದಿ ಸ್ಪರ್ಧೆಯನ್ನು ನಡೆಸಲಾಯಿತು.

ಈ ಕಾರ್ಯಕ್ರಮದಲ್ಲಿ ರೋಟರಿ ಅಧ್ಯಕ್ಷರಾದ ರೋಟೇರಿಯನ್ ಶ್ರೀ ಜಯರಾಮ್, ರೋಟೇರಿಯನ್ ಶ್ರೀಕಾಂತ್ ಕಾಮತ್, ಜಿಲ್ಲಾ ರೋವರ್ಸ್ ಯುವ ಅಧ್ಯಕ್ಷರಾದ ಶ್ರೀ ಪ್ರೀತೇಶ್, ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಿಠಲ್ ಶೆಟ್ಟಿ, ಕಾರ್ಯದರ್ಶಿ ಶ್ರೀಮತಿ ಪ್ರಮೀಳಾ, ತರಬೇತುದಾರರಾದ ಶ್ರೀ ರಮೇಶ್ ಆಚಾರ್ಯ ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದು ಮಕ್ಕಳಿಗೆ ಮತ್ತು ಕಾರ್ಯಕ್ರಮಕ್ಕೆ ಶುಭ ಹಾರೈಸಿದರು. ಕಾರ್ಯಕ್ರಮದ ನಿರೂಪಣೆಯನ್ನು

ಎಸ್.ಡಿ.ಎಂ. ಪದವಿ ಪೂರ್ವ ಕಾಲೇಜಿನ ರೇಂಜರ್ ಕು|| ಕೀರ್ತನ ಮಾಡಿದರು. ಸ್ವಾಗತವನ್ನು ಉಪಾಧ್ಯಕ್ಷರಾದ ಶ್ರೀ ವಿಠಲ್ ಶೆಟ್ಟಿ, ಧನ್ಯವಾದವನ್ನು ಕಾರ್ಯದರ್ಶಿ ಶ್ರೀಮತಿ ಪ್ರಮೀಳಾರವರು ನೆರವೇರಿಸಿದರು.

* ಜುಲೈ 24 ರಂದು ರೋಟರಿ ಆಂಗ್ಲ ಮಾಧ್ಯಮ ಶಾಲೆ ಮೂಡಬಿದ್ರೆಯಲ್ಲಿ 2019-20ನೇ ಸಾಲಿನ ಜಿಲ್ಲಾ ಮಟ್ಟದ ತೃತೀಯ ಚರಣ್ ಕಬ್-ಸುವರ್ಣಗರಿ ಬುಲ್‌ಬುಲ್ ಪರೀಕ್ಷಾ ಶಿಬಿರವು ನಡೆಯಿತು. ಪರೀಕ್ಷಾ ಶಿಬಿರವನ್ನು ರೋಟರಿ ಆಂಗ್ಲ ಮಾಧ್ಯಮ ಶಾಲೆಯ ಪ್ರಾಂಶುಪಾಲರು ಹಾಗೂ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ರೋಟೆರಿಯನ್ ಶ್ರೀ ವಿನ್ಸೆಂಟ್ ಡಿ'ಕೋಸ್ತರವರು ಉದ್ಘಾಟಿಸಿ ಮಾತನಾಡಿದರು.

ಅತಿಥಿಗಳಾಗಿ ಮೂಡಬಿದ್ರೆ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ವಸಂತ್ ಕಲ್ಲಮುಂಡ್ಕೂರು, ಕೋಶಾಧಿಕಾರಿ, ಶ್ರೀ ಕೃಷ್ಣಮೂರ್ತಿ ರೋಟರಿ ಸೆಂಟ್ರಲ್ ಸ್ಕೂಲ್‌ನ ಮುಖ್ಯ ಶಿಕ್ಷಕಿ ಶ್ರೀಮತಿ ಭಾರತಿ ನಾಯಕ್ ಎ.ಎಲ್.ಟಿ.(ಕಬ್), ಕಬ್ ವಿಭಾಗದ ನಾಯಕಿ ಶ್ರೀಮತಿ ಗೀತಾ ಶೆಟ್ಟಿ, ಹೆಚ್.ಡಬ್ಲ್ಯೂ.ಬಿ., (ಕಬ್) ಬುಲ್‌ಬುಲ್ ವಿಭಾಗದ ನಾಯಕಿ ಶ್ರೀಮತಿ ಕಾಮಾಕ್ಷಿ ಹೆಚ್.ಡಬ್ಲ್ಯೂ.ಬಿ. (ಕಬ್) ಉಪಸ್ಥಿತರಿದ್ದರು. ಕಬ್ ವಿಭಾಗದಲ್ಲಿ 44 ಹಾಗೂ ಬುಲ್‌ಬುಲ್ ವಿಭಾಗದಲ್ಲಿ 69 ವಿದ್ಯಾರ್ಥಿಗಳು ಭಾಗವಹಿಸಿದ್ದರು

* ಜುಲೈ 25 ರಂದು ಎಸ್.ವಿ.ಎಸ್. ಆಂಗ್ಲ ಮಾಧ್ಯಮ ಶಾಲೆ ವಿದ್ಯಾಗಿರಿ, ಬಂಟ್ವಾಳದಲ್ಲಿ 2019-20ನೇ ಸಾಲಿನ ಜಿಲ್ಲಾ ಮಟ್ಟದ ತೃತೀಯ ಚರಣ ಕಬ್, ಸುವರ್ಣಗರಿ ಬುಲ್‌ಬುಲ್ ಪರೀಕ್ಷಾ ಶಿಬಿರವು ನಡೆಯಿತು. ಪರೀಕ್ಷಾ ಶಿಬಿರವನ್ನು ಎಸ್.ವಿ.ಎಸ್. ಆಂಗ್ಲ ಮಾಧ್ಯಮ ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ಸುಜಾತರವರು ಉದ್ಘಾಟಿಸಿದರು. ಕಬ್ ವಿಭಾಗದ ನಾಯಕಿ ಶ್ರೀಮತಿ ಹಿಲ್ಡಾ ತಾವ್ರೋ ಹೆಚ್.ಡಬ್ಲ್ಯೂ.ಬಿ.(ಕಬ್) ಬುಲ್ ಬುಲ್ ವಿಭಾಗದ ನಾಯಕಿ ಶ್ರೀಮತಿ ಕಾಮಾಕ್ಷಿ, ಹೆಚ್.ಡಬ್ಲ್ಯೂ.ಬಿ.(ಫ್ಲಾ.) ಉಪಸ್ಥಿತರಿದ್ದರು. ಕಬ್ ವಿಭಾಗದಲ್ಲಿ 62 ಹಾಗೂ ಬುಲ್‌ಬುಲ್ ವಿಭಾಗದಲ್ಲಿ 75 ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಆಗಸ್ಟ್ 8 ರಂದು ಸುದಾನ ವಸತಿಯುತ ಶಾಲೆ, ಪುತ್ತೂರು ಇಲ್ಲಿ ಜಿಲ್ಲಾ ಮಟ್ಟದ ತೃತೀಯ ಚರಣ ಕಬ್, ಸುವರ್ಣಗರಿ ಬುಲ್‌ಬುಲ್ ಪರೀಕ್ಷಾ ಶಿಬಿರ ನಡೆಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಶ್ರೀಧರ್ ರೈರವರು ವಹಿಸಿದ್ದರು. ಶಿಬಿರವನ್ನು ಸುಧಾನ ವಸತಿಯುತ ಶಾಲೆಯ ಆಡಳಿತ ಅಧಿಕಾರಿ ಶ್ರೀ ಐತ್ತಪ್ಪ ರೈ ರವರು ಉದ್ಘಾಟಿಸಿ ಮಾತನಾಡಿದರು. ಕಬ್ ವಿಭಾಗದ ನಾಯಕ ಶ್ರೀ ಪ್ರಸಾದ್ ಆಚಾರ್ಯ (ಕಬ್), ಬುಲ್‌ಬುಲ್ ವಿಭಾಗದ ನಾಯಕಿ ಶ್ರೀಮತಿ ಕಾಮಾಕ್ಷಿ (ಫ್ಲಾ) ಉಪಸ್ಥಿತರಿದ್ದರು. ಕಬ್ ವಿಭಾಗದಲ್ಲಿ 118 ಹಾಗೂ ಬುಲ್‌ಬುಲ್ 112 ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಆಗಸ್ಟ್ 6ರಂದು ಸ್ಕೌಟ್ಸ್-ಗೈಡ್ಸ್ ಭವನ, ಲಾಲ್‌ಭಾಗ್, ಮಂಗಳೂರಿನಲ್ಲಿ ಜಿಲ್ಲಾ ಮಟ್ಟದ ತೃತೀಯ ಚರಣ ಕಬ್, ಸುವರ್ಣಗರಿ ಬುಲ್‌ಬುಲ್ ಪರೀಕ್ಷಾ ಶಿಬಿರವು ನಡೆಯಿತು. ಶಿಬಿರವನ್ನು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀಮತಿ ಶುಭ ವಿಶ್ವನಾಥ್ ಉದ್ಘಾಟಿಸಿದರು. ಕಬ್ ವಿಭಾಗದ ನಾಯಕರಾಗಿ ಶ್ರೀಮತಿ ಗೀತಾ ಶೆಟ್ಟಿ, ಹೆಚ್.ಬ್ಲ್ಯೂ.ಬಿ.(ಕಬ್) ಬುಲ್‌ಬುಲ್ ವಿಭಾಗದ ನಾಯಕಿಯಾಗಿ ಶ್ರೀಮತಿ ಕಾಮಾಕ್ಷಿ, ಹೆಚ್.ಡಬ್ಲ್ಯೂ.ಬಿ. (ಬು) ಉಪಸ್ಥಿತರಿದ್ದರು. ಕಬ್ ವಿಭಗದಲ್ಲಿ 114, ಬುಲ್‌ಲ್ ವಿಭಾಗದಲ್ಲಿ 128 ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಜುಲೈ 30 ರಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ, ಲಾಲ್‌ಭಾಗ್, ಮಂಗಳೂರಿನಲ್ಲಿ ಚತುರ್ಥ ಚರಣ ಕಬ್, ಸುವರ್ಣಗರಿ ಬುಲ್‌ಬುಲ್, ಗೋಲ್ಡನ್ ಆ್ಯರೋ ಕಬ್-ಬುಲ್‌ಬುಲ್ ಹಾಗೂ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಪ್ರಶಸ್ತಿ ಪ್ರದಾನ ಸಮಾರಂಭ ಕಾರ್ಯಕ್ರಮ ನಡೆಯಿತು. ಕಾರ್ಯಕ್ರಮದಲ್ಲಿ ಅಧ್ಯಕ್ಷ ಸ್ಥಾನವನ್ನು ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಡಾ. ಎನ್.ಜಿ. ಮೋಹನ್‌ರವರು ವಹಿಸಿದ್ದರು.

ಪ್ರಶಸ್ತಿ ಪತ್ರವನ್ನು ಪ್ರೊ.ಪಿ. ಸುಬ್ರಹ್ಮಣ್ಯ ಎಡಿಪತ್ತಾಯ ಕುಲಪತಿಗಳು, ಮಂಗಳೂರು ವಿಶ್ವವಿದ್ಯಾನಿಲಯ ಇವರು ನೀಡಿ ಗೌರವಿಸಿದರು. ವೇದಿಕೆಯಲ್ಲಿ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲೆಯ ವಿವಿಧ ಶಾಲೆಗಳಿಂದ 400 ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಜಿಲ್ಲಾ ಸಂಘಟಕ ಶ್ರೀ ಕೆ. ಭರತ್‌ರಾಜ್ ಸಂಘಟಿಸಿದರು.

* ಜುಲೈ 21 ರಿಂದ 27 ರ ವರೆಗೆ ಮೈಸೂರು ವಿಭಾಗ ಮಟ್ಟದ ರೋವರ್, ರೋವರ್ ಲೀಡರ್ ಹಾಗೂ ರೇಂಜರ್ ಲೀಡರ್ ತರಬೇತಿಯು ಜಿಲ್ಲಾ ತರಬೇತಿಕೇಂದ್ರ, ಪಿಲಿಕುಳದಲ್ಲಿ

ನಡೆಯಿತು. ರೋವರ್ ಸ್ಕೌಟ್ಸ್ ಲೀಡರ್ ವಿಭಾಗಕ್ಕೆ ಶ್ರೀ ಕೆ.ಎಸ್. ಪ್ರತಿಮ್ ಕುಮಾರ್, ಎ.ಎಲ್.ಟಿ.(ರೋವರ್) ಮತ್ತು ರೇಂಜರ್ ವಿಭಾಗಕ್ಕೆ ಕೇರಳದ ಸಿಸ್ಟರ್ ರಜಿತಾ ಎಲ್.ಟಿ. (ರೇಂಜರ್) ನಾಯಕರಾಗಿದ್ದರು. ರೋವರ್ ಸ್ಕೌಟ್ ಲೀಡರ್ ತರಬೇತಿಗೆ 19 ಉಪನ್ಯಾಸಕರು ಮತ್ತು ರೇಂಜರ್ ತರಬೇತಿಗೆ 20 ಉಪನ್ಯಾಸಕರು ಭಾಗವಹಿಸಿದ್ದರು.

ಜುಲೈ 27 ರಂದು ಸಮಾರೋಪ ಸಮಾರಂಭ ದಕ್ಷಿಣ ಕನ್ನಡ ಜಿಲ್ಲೆಯ ಮುಖ್ಯ ಆಯುಕ್ತರು ಶ್ರೀ ಎನ್.ಜಿ. ಮೋಹನ್ ಅಧ್ಯಕ್ಷತೆಯಲ್ಲಿ ನಡೆಯಿತು. ಸಿಸ್ಟರ್ ರಜಿತಾ ಎಲ್.ಟಿ. (ರೇಂಜರ್) 7 ದಿನಗಳ ಶಿಬಿರದ ವರದಿಯನ್ನು ನೀಡಿದರು. ಉಪನ್ಯಾಸಕರಾದ ರೋವರ್ ಸ್ಕೌಟ್ ಲೀಡರ್ ಅವಿಲ್ ಕರ್ಕೆರಾ ಹಾಗೂ ಜೆಸಿಂತಾ ರೇಂಜರ್ ಲೀಡರ್ ಎಲ್ಲರ ಪರವಾಗಿ ಶಿಬಿರದ ಅನಿಸಿಕೆಯನ್ನು ನೀಡಿದರು. ಇದೇ ಸಮಯದಲ್ಲಿ ಶಿಬಿರದ ಹಸ್ತ ಪತ್ರಿಕೆ "ಚಾಣಕ್ಯ"ವನ್ನು ಸ್ಕೌಟ್ ಆಯುಕ್ತರು ಶ್ರೀ ರಾಮಶೇಷ ಶೆಟ್ಟಿ ಬಿಡುಗಡೆ ಮಾಡಿದರು. ಶ್ರೀ ಕೆ.ಎಸ್. ಪ್ರತಿಮ್ ಕುಮಾರ್ ಜಿಲ್ಲಾ ತರಬೇತಿ ಆಯಕ್ತರು (ಸ್ಕೌ) ಧನ್ಯವಾದ ನೀಡಿದರು. ಡಾ. ಅಪರ್ಣ ಆಳ್ವ ಕಾರ್ಯಕ್ರಮ ನಿರ್ವಹಿಸಿದರು.

* ಜುಲೈ 29 ರಿಂದ ಆಗಸ್ಟ್ 4 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಸ್ಕೌಟ್ಸ್ ಮಾಸ್ಟರ್ಸ್ ಮತ್ತು ಕಬ್ ಮಾಸ್ಟರ್ಸ್‌ಗಳ ಮೂಲ ತರಬೇತಿ ಶಿಬಿರ ನಡೆಯಿತು. ಕಬ್ ವಿಭಾಗಕ್ಕೆ ಶ್ರೀಮತಿ ಸಂಧ್ಯಾರಾಣಿ ಎಲ್.ಟಿ.(ಕಬ್) ಚಿಕ್ಕಮಗಳೂರು, ಸ್ಕೌಟ್ಸ್ ವಿಭಾಗಕ್ಕೆ ನಾಯಕರಾಗಿ ಶ್ರೀ ಬಸವರಾಜ್ ಎಲ್.ಟಿ.(ಸ್ಕೌ) ದಾವಣಗೆರೆ ಭಾಗವಹಿಸಿದ್ದರು. ಕಬ್ ವಿಭಾಗದಲ್ಲಿ 27 ಮತ್ತು ಸ್ಕೌಟ್ ವಿಭಾಗದಲ್ಲಿ 31 ಸ್ಕೌಟರ್ಸ್ ಭಾಗವಹಿಸಿದ್ದರು.

ಆಗಸ್ಟ್ 4 ರಂದು ಶಿಬಿರದ ಸಮಾರೋಪ ಸಮಾರಂಭವು ನಡೆಯಿತು. ಈ ಸಮಾರಂಭದ ಅಧ್ಯಕ್ಷ ಸ್ಥಾನವನ್ನು ಶ್ರೀ ಎನ್.ಜಿ.ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ವೇದಿಕೆಯಲ್ಲಿ ಅತಿಥಿಗಳಾಗಿ ಪಿಲಿಕುಳ ನಿಸರ್ಗಧಾಮದ ವ್ಯವಸ್ಥಾಪಕರಾದ ಶ್ರೀ ಕೆ.ವಿ. ರಾವ್, ಉಪಸ್ಥಿತರಿದ್ದರು. ಇದೇ ಸಮಯದಲ್ಲಿ ಶಿಬಿರದ ಹಸ್ತ ಪತ್ರಿಕೆ "ಚಿಗುರು" ಇದನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಜಿ. ಕಜೆ ಬಿಡುಗಡೆ ಮಾಡಿದರು. ಕಬ್ ವಿಭಾಗದ ಶ್ರೀಮತಿ ಸಂಧ್ಯಾರಾಣಿ ಎಲ್.ಟಿ. (ಕಬ್) 7 ದಿನಗಳ ತರಬೇತಿಯ ವರದಿಯನ್ನು ನೀಡಿದರು. ಸ್ಕೌಟ್ ವಿಭಾಗದ ವತಿಯಿಂದ ಶ್ರೀ ಮಹಮ್ಮದ್ ಆಶಿರ್, ಕಬ್ ವಿಭಾಗದ ವತಿಯಿಂದ ಜಾಸ್ಮಿನ್ ತಮ್ಮ ಅನಿಸಿಕೆಯನ್ನು ನೀಡಿದರು. ಶ್ರೀ ಶಂಕರ್ ಭಟ್ ಅತಿಥಿಗಳನ್ನು ಸ್ವಾಗತಿಸಿದರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಪ್ರತಿಮ್ ಕುಮಾರ್ ರವರು ಧನ್ಯವಾದ ನೀಡಿದರು. ಶ್ರೀ ಪ್ರತಿಪ್ ರವರು ಕಾರ್ಯಕ್ರಮ ನಿರ್ವಹಿಸಿದ್ದರು.

* ಆಗಸ್ಟ್ 10 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಪಂಜ ಸ್ಥಳೀಯ ಸಂಸ್ಥೆಯ ವತಿಯಿಂದ ತನ್ನ ವ್ಯಾಪ್ತಿಯಲ್ಲಿರುವ 17 ಗ್ರಾಮಪಂಚಾಯತ್‌ಗಳ ಎಲ್ಲ ಸದಸ್ಯರಿಗೆ ಒಂದು ದಿನದ ಸ್ಕೌಟ್ಸ್-ಗೈಡ್ಸ್ ಮಾಹಿತಿ ಕಾರ್ಯಾಗಾರವನ್ನು ಪಂಜ ಗ್ರಾಮ ಪಂಚಾಯತ್ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು.

ಈ ಕಾರ್ಯಾಗಾರವನ್ನು ಪಂಜ ಗ್ರಾಮಪಂಚಾಯತ್ ಅಧ್ಯಕ್ಷರಾದ ಶ್ರೀ ಕಾರ್ಯಪ್ಪ ಗೌಡ ಚಿದ್ಗಲ್ ದೀಪ ಬೆಳಗಿಸಿ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಗ್ರಾಮಪಂಚಾಯತ್ ಗ್ರಾಮಾಭಿವೃದ್ಧಿ ಅಧಿಕಾರಿ ಶ್ರೀ ಪುರುಷೋತ್ತಮ ಗೌಡ ಮಣಿಯಾನ, ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ದೇವಿಪ್ರಸಾಧ್ ಜಾಕೆ, ಕೋಶಾಧಿಕಾರಿ ಶ್ರೀ ವಾಸುದೇವ ನಡ್ಕ, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷ ಶ್ರೀ ದಾಮೋಧರ ನೇರಳ ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಸ್ಕೌಟ್-ಗೈಡ್ ಚಟುವಟಿಕೆಗಳಿಗಾಗಿ ನೀಡಬೇಕಾದ ವಾರ್ಷಿಕ ವಂತಿಕೆ 5,000/- ರೂ.ಗಳ ಚೆಕ್‌ನ್ನು ಪಂಜ ಗ್ರಾಮಪಂಚಾಯತ್ ವತಿಯಿಂದ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಲಾಯಿತು. ಸುಳ್ಯ ಕ್ಷೇತ್ರ ಸಂಪನ್ಮೂಲ ವ್ಯಕ್ತಿ, ಸ್ಥಳೀಯ ಸಂಸ್ಥೆಯ ಸಂಘಟಕ ಶ್ರೀ ಲಿಂಗಪ್ಪ ಬೆಳ್ಳಾರೆ ಸ್ವಾಗತಿಸಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಉದಯಕುಮಾರ್ ರೈ ಬಾಳಿಲ ನಿರೂಪಿಸಿದರು. ಸಂಪನ್ಮೂಲ ವ್ಯಕ್ತಿಗಳಾಗಿ ರಾಜ್ಯ ತರಬೇತುದಾರರಾದ ಶ್ರೀ ಲಿಂಗಪ್ಪ ಬೆಳ್ಳಾರೆ ಹಾಗೂ ಶ್ರೀ ಕೆ.ಎನ್. ಸುಬ್ರಹ್ಮಣ್ಯ ಸಹಕರಿಸಿದರು.

* ಆಗಸ್ಟ್ 3 ರಂದು ಪಂಜ ಸ್ಥಳೀಯ ಸಂಸ್ಥೆ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ಪಂಜ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿರುವ ಪ್ರಾಥಮಿಕ ಮತ್ತು ಪ್ರೌಢಶಾಲಾ ಸ್ಕೌಟ್-ಗೈಡ್, ಕಬ್-ಬುಲ್‌ಬುಲ್, ರೋವರ್-ರೇಂಜರ್‌ಗಳ ದೇಶಭಕ್ತಿಗೀತೆಗಳ ಗೀತಗಾಯನ ಸ್ಪರ್ಧೆಯನ್ನು ಪಂಜ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು.

ಈ ಕಾರ್ಯಕ್ರಮವನ್ನು ಪಂಜ ಗ್ರಾಮಪಂಚಾಯತ್ ಅಧ್ಯಕ್ಷರಾದ ಶ್ರೀ ಕಾರ್ಯಪ್ಪ ಗೌಡ ಚಿದ್ಗಲ್ ದೀಪ ಬೆಳಗಿಸಿ






ಸಂಪನ್ಮೂಲ ವ್ಯಕ್ತಿ, ಸ್ಥಳೀಯ ಸಂಸ್ಥೆಯ ಸಂಘಟಕ ಶ್ರೀ ಲಿಂಗಪ್ಪ ಬೆಳ್ಳಾರೆ ಸ್ವಾಗತಿಸಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಉದಯಕುಮಾರ್ ರೈ ಬಾಳಿಲ ವಂದಿಸಿದ ಕಾರ್ಯಕ್ರಮವನ್ನು ಸಹಾಯಕ ಕಾರ್ಯದರ್ಶಿ ಶ್ರೀ ಶಿವಪ್ರಸಾದ್ ಬಾಳಿಲ ನಿರೂಪಿಸಿದರು. 15 ಶಾಲೆಗಳ ಸ್ಕೌಟ್ ಗೈಡ್ ತಂಡ ಈ ಸ್ಪರ್ಧೆಯಲ್ಲಿ ಭಾಗವಹಿಸಿರುತ್ತಾರೆ. ಶ್ರೀ ಸುಭಾಷ್ ಪಂಜ, ಶ್ರೀ ಶಶಿಧರ ಮಾವಿನಕಟ್ಟೆ ಹಾಗೂ ಶ್ರೀಮತಿ ರೇಖಾ ಎಸ್. ಶೇಟ್ ತೀರ್ಪುಗಾರರಾಗಿ ಸಹಕರಿಸಿದರು.

* ಜುಲೈ 29 ರಂದು ಸಂತ ಜೋಸೆಫ್ ಅನುದಾನಿತ ಹಿರಿಯ ಪ್ರಾ. ಶಾಲೆ ಫಜೀರು, ಇಲ್ಲಿ ಸ್ಥಳೀಯ ಸಂಸ್ಥೆ ಮುಡಿಪು ಇದರ ವತಿಯಿಂದ ಅಂತರ್ ಶಾಲಾ ದೇಶಭಕ್ತಿ ಗೀತೆಗಳ ಗೀತಗಾಯನ ಸ್ಪರ್ಧೆಯನ್ನು ಏರ್ಪಡಿಸಲಾಯಿತು. ವೇದಿಕೆಯಲ್ಲಿ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಚಂದ್ರಶೇಖರ ಶೆಟ್ಟಿ, ಶಾಲೆಯ ಸಂಚಾಲಕರಾದ ವಂದನೀಯ ಫಾದರ್ ಸುನೀಲ್ ಜೋಸೆಫ್ ವೇಗಸ್, ಶಾಲಾ ಮುಖ್ಯೋಪಾಧ್ಯಾಯಿನಿಯರಾದ ಸಿಸ್ಟರ್ ಈನೆಟ್, ತೀರ್ಪುಗಾರರಾದ ಶ್ರೀ ಹರೀಶ್ ಕುಮಾರ್ ನಂದಾವರ, ಶ್ರೀಮತಿ ಪ್ರಮೀಳ, ಅಸಿಸ್ಸಿ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜೋನ್ ಎ. ಫೆರ್ನಾಂಡಿಸ್, ಕೋಶಾಧಿಕಾರಿ ಶ್ರೀ ಫೆಲಿಕ್ಸ್ ಡಿ'ಸೋಜ ಉಪಸ್ಥಿತರಿದ್ದರು. ದೀಪ ಬೆಳಗಿಸುವ ಮೂಲಕ ವಂದನೀಯ ಫಾದರ್ ಸುನೀಲ್ ವೇಗಸ್‌ರವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಲ್ಲಿ ಓರ್ವರಾದ ಶ್ರೀ ಚಂದ್ರಶೇಖರ್ ಶೆಟ್ಟಿಯವರು ಕಾರ್ಯಕ್ರಮಕ್ಕೆ ಶುಭ ಕೋರಿದರು. ಶ್ರೀ ಫೆಲಿಕ್ಸ್ ಡಿ'ಸೋಜ ಸ್ವಾಗತಿಸಿ, ಶ್ರೀ ಜೋನ್‌ಫೆರ್ನಾಂಡೀಸ್ ವಂದಿಸಿದರು. ಗೈಡರ್ ಶ್ರೀಮತಿ ವಿಲ್ಮಾ ಡಿ'ಸೋಜ ಕಾರ್ಯಕ್ರಮ ನಿರೂಪಿಸಿದರು.

* ಆಗಸ್ಟ್ 3 ರಂದು ಉಳ್ಳಾಲ ಸ್ಥಳೀಯ ಸಂಸ್ಥೆಯ ವತಿಯಿಂದ ಸರಕಾರಿ ಹಿ.ಪ್ರಾ. ಶಾಲೆಯಲ್ಲಿ ಎಸ್.ಡಿ.ಎಂ.ಸಿ. ಅಧ್ಯಕ್ಷ ಶ್ರೀ ಅಶ್ರಫ್ ರವರ ಅಧ್ಯಕ್ಷತೆಯಲ್ಲಿ ಗೀತಗಾಯನ ಸ್ಪರ್ಧೆಯ ಉದ್ಘಾಟನೆ ನಡೆಯಿತು. ಉದ್ಘಾಟನೆಯನ್ನು ಪಾವೂರು ಪಂಚಾಯತ್‌ನ ಅಧ್ಯಕ್ಷರಾದ ಶ್ರೀ ಫಿರೋಜ್ ಮಲಾರ್‌ರವರು ನೆರವೇರಿಸಿದರು. ಪಂಚಾಯತ್ ಉಪಾಧ್ಯಕ್ಷರಾದ ಶ್ರೀಮತಿ ಲೀಲಾವತಿ, ವಾರ್ಡ್ ಸದಸ್ಯರು ಶ್ರೀ ಮಹಮ್ಮದ್ ಸಂಸ್ಥೆ ಮುಖ್ಯಸ್ಥರಾದ ಶ್ರೀಮತಿ ಸುಶೀಲ ಬ್ರ್ಯಾ, ವೇದಿಕೆಯಲ್ಲಿ ಉಪಸ್ಥಿತರಿದ್ದರು. ಸಹಕಾರ್ಯದರ್ಶಿ ಶ್ರೀ ಪ್ರತೀಪರು ಎಲ್ಲರನ್ನು ಸ್ವಾಗತಿಸಿದರು. ಕಾರ್ಯದರ್ಶಿ ಶ್ರೀ ಮಜೀದ್ ಮಲಾರ್ ಪ್ರಾಸ್ತಾವಿಕ ಮಾತನಾಡಿದರು. ಮುಖ್ಯ ಶಿಕ್ಷಕಿ ಗೈಡರ್ ಶ್ರೀಮತಿ ಸುಶೀಲ ಬ್ರ್ಯಾ ವಂದನಾರ್ಪಣೆ ಗೈದರು. ಶಾಲೆಯ ಸಹಶಿಕ್ಷಕಿ ಶ್ರೀಮತಿ ನಳಿನಿಯವರು ಕಾರ್ಯಕ್ರಮ ನಿರೂಪಿಸಿದರು. ಮುಖ್ಯ ತೀರ್ಪುಗಾರರಾಗಿ ಶ್ರೀಮತಿ ಸೀತಾಲಕ್ಷ್ಮೀ ಶ್ರೀಮತಿ ವೀಣಾ ಭಂಡಾರಿ, ಶ್ರೀಮತಿ ಸುನಂದ ರವರು ಕಾರ್ಯನಿರ್ವಹಿಸಿದರು.

## ಗದಗ

ಜುಲೈ 30 ರಂದು ಸ್ಥಳೀಯ ಸಂಸ್ಥೆ, ರೋಣ ತಾಲ್ಲೂಕ ವತಿಯಿಂದ ದೇಶಭಕ್ತಿ ಗೀತ-ಗಾಯನ ಶಿಬಿರವನ್ನು ಗುರುಭವನದಲ್ಲಿ ನಡೆಸಲಾಯಿತು. ಮುಖ್ಯ ಅತಿಥಿಗಳಾಗಿ ಶ್ರೀ ಜಿ.ಹೆಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳು ಈ ಶಿಬಿರವನ್ನು ಸದುಪಯೋಗಪಡಿಸಿಕೊಳ್ಳಬೇಕು. ಎಂದು ತಿಳಿಸಿದರು. ಶ್ರೀ ಆರ್.ಎಸ್. ಮುರಗೇರಿ, ಶಿಕ್ಷಣ ಸಂಯೋಜಕರು ಮಾತನಾಡುತ್ತಾ ಶಾಲೆಯ ಶಿಕ್ಷಣ ಹಾಗೂ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ವಿಶಿಷ್ಟವಾಗಿರುತ್ತದೆಂದು ತಿಳಿಸಿದರು.ಉದ್ಘಾಟನೆಯನ್ನು ಶ್ರೀ ಬಳಗಾನೂರ, ಸ್ಥಳೀಯ ಸಂಸ್ಥೆ ಕಾರ್ಯಾಧ್ಯಕ್ಷರು ಮಾಡಿದರು. ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ಮಾತನಾಡುತ್ತಾ ಈ ಶಿಬಿರದ ಉದ್ದೇಶ, ಹಿನ್ನೆಲೆಯನ್ನು ವಿಸ್ತಾರವಾಗಿ ತಿಳಿಸಿದರು. ಅಧ್ಯಕ್ಷತೆಯನ್ನು ಶ್ರೀಮತಿ ಶರಣಮ್ಮಕಾರಿ, ತಹಶೀಲ್ದಾರ ರೋಣ ವಹಿಸಿ ಮಾತನಾಡುತ್ತಾ ನಮ್ಮ ತಾಲ್ಲೂಕಿನಲ್ಲಿ ಸ್ಕೌಟ್ಸ್-ಗೈಡ್ಸ್





ಚಟುವಟಿಕೆಗಳಿಗೆ ತಮ್ಮ ಸಹಕಾರ ಇದೆ ಎಂದು ತಿಳಿಸಿದರು ಹಾಗೂ ತಾಲ್ಲೂಕ ಸ್ಕೌಟ್ ಭವನಕ್ಕೆ ಜಾಗವನ್ನು ಮಂಜೂರು ಮಾಡುವ ಭರವಸೆ ನೀಡಿದರು. ಕಾರ್ಯಕ್ರಮದಲ್ಲಿ ಶ್ರೀ ಪಿ.ಆರ್. ಹಿರೇಮಠ, ಶ್ರೀ ಸಿ.ಬಿ. ಕುದುರಿ, ಶ್ರೀ ಬಿ.ವಿ. ಮಡಿವಾಳರು ಶ್ರೀಮತಿ ಜಯಶ್ರೀ ನೀಲಗಾರ, ಶ್ರೀ ಜೆ.ಎಸ್. ಪಾಟೀಲ ತಾಲ್ಲೂಕಾ ಕಾರ್ಯದರ್ಶಿಗಳು ನಿರೂಪಣೆ ಶ್ರೀ ಗೋಪಾಲಕೃಷ್ಣ ವಂದನಾರ್ಪಣೆಯನ್ನು ಶ್ರೀ ಕೆ.ಎಸ್. ಹವಳಪ್ಪನವರ ಮಾಡಿದರು. ತಾಲ್ಲೂಕಿನ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜುಲೈ 26 ರಂದು ಸ್ಥಳೀಯ ಸಂಸ್ಥೆ, ಗಜೇಂದ್ರ ಗಡದ ವತಿಯಿಂದ ಗೀತಗಾಯನ ಶಿಬಿರವನ್ನು ನಡೆಸಲಾಯಿತು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಸಂಯುಕ್ತ ಬಂಡಿರವರು ಮಾತನಾಡುತ್ತಾ ಈ ಸ್ಕೌಟ್ಸ್-ಗೈಡ್ಸ್ ಶಿಬಿರ ಮಕ್ಕಳಲ್ಲಿ ದೇಶಾಭಿಮಾನ ಮೂಡಿಸುವಲ್ಲಿ ಪರಿಣಾಮಕಾರಿಯಾಗುತ್ತದೆ ಹಾಗೂ ಗಜೇಂದ್ರಗಡ ತಾಲ್ಲೂಕಾ ಸ್ಕೌಟ್ ಭವನಕ್ಕೆ ಜಾಗವನ್ನು ನೀಡುವ ಭರವಸೆ ನೀಡಿದರು. ಈ ಶಿಬಿರದಲ್ಲಿ ಹಟ್ಟಿಮನಿ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಪದಾಧಿಕಾರಿಗಳು ಭಾಗವಹಿಸಿದ್ದರು.

* ಆಗಸ್ಟ್ 8 ರಂದು ಮುಂಡರಿಗಿ ತಾಲ್ಲೂಕು ಸ್ಥಳೀಯ ಸಂಸ್ಥೆ ವತಿಯಿಂದ ದೇಶಭಕ್ತಿ ಗೀತೆ-ಗೀತಗಾಯನ ಶಿಬಿರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಂಘದಲ್ಲಿ ನಡೆಸಲಾಯಿತು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಎಂ. ಹಳ್ಳಗುಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾತನಾಡುತ್ತಾ ದೇಶಭಕ್ತಿ ಶಿಬಿರ ನಡೆಯುತ್ತಿರುವುದರಿಂದ ಮಕ್ಕಳಲ್ಲಿ ದೇಶಾಭಿಮಾನ ಬೆಳೆಯುತ್ತದೆ ಎಂದು ತಿಳಿಸಿದರು. ಶ್ರೀ ಉಮೇಶ ಗಂಗಾಪುರ, ಶ್ರೀಮತಿ ಕೆಳಗಿನಮನಿ, ಶ್ರೀಮತಿ ಇನಾಮತಿ ವಿವಿಧ ಶಾಲೆಗಳ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.

* ಆಗಸ್ಟ್ 10 ರಂದು ರೋಣ ತಾಲ್ಲೂಕ ಸ್ಥಳೀಯ ಸಂಸ್ಥೆ ವತಿಯಿಂದ ನೆರೆಹೊರೆಯ ಸಂತ್ರಸ್ಥರಿಗೆ ಸರಕಾರಿ ಪ್ರೌಢಶಾಲೆ ಹಿರೇಹಾಳದಲ್ಲಿ ಅದೇ ಶಾಲೆಯ ಸ್ಕೌಟ್ಸ್‌ಗಳು ಹಾಗೂ ಶ್ರೀ ಜೆ.ಎಲ್. ಪಾಟೀಲ, ತಾಲ್ಲೂಕು ಕಾರ್ಯದರ್ಶಿಗಳು ಸೇವೆಯನ್ನು ಸಲ್ಲಿಸಿದರು.

* ಆಗಸ್ಟ್ 5 ರಂದು ನಡೆದ 73ನೇ ಸ್ವಾತಂತ್ರ್ಯೋತ್ಸವದ ಪಥಸಂಚಲನದಲ್ಲಿ ಪ್ರಥಮಸ್ಥಾನವನ್ನು ಕೆ.ಎಲ್.ಇ. ಶಾಲೆ, ಗದಗ ಸ್ಕೌಟ್ಸ್‌ಗಳು ಪಡೆದರು. ಗದಗ ಪಬ್ಲಿಕ್ ಶಾಲೆ, ಗದಗ, ದ್ವಿತೀಯ ಸ್ಥಾನವನ್ನು ಪಡೆದರು.

* ಆಗಸ್ಟ್ 7ರಂದು ರೋವರ್ಸ್-ರೇಂಜರ್ಸ್ ಮಾಹಿತಿ ಶಿಬಿರವನ್ನು ಸರಕಾರಿ ಪದವಿ ಪೂರ್ವಕಾಲೇಜ್ ರೋಣದಲ್ಲಿ ನಡೆಸಲಾಯಿತು. ಮುಖ್ಯ ಅತಿಥಿಗಳಾಗಿ ಶ್ರೀ ಅಸೂಟಿ, ನಿವೃತ್ತ ಉಪನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ ಗದಗ ರವರು ಮಾತನಾಡುತ್ತಾ, ಗದಗ ಜಿಲ್ಲೆಯಲ್ಲಿ ಎಲ್ಲಾ ಕಾಲೇಜುಗಳಲ್ಲಿ ರೋವರ್-ರೇಂಜರ್ ಕಡ್ಡಾಯವಾಗಿದೆ ಎಂದು ತಿಳಿಸಿದರು. ನಂತರ ಅಧ್ಯಕ್ಷತೆ ವಹಿಸಿದ್ದ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಕಲ್ಲನಗೌಡರ ವಹಿಸಿ ಮಾತನಾಡುತ್ತಾ ರೋವರ್-ರೇಂಜರ್‌ಗೆ ಸೇರುವುದರಿಂದ ಒಳ್ಳೆಯ ನಾಗರಿಕರಾಗುತ್ತಾರೆ ತಮ್ಮ ಸಂಪೂರ್ಣ ಸಹಕಾರ ಇದೆ ಎಂದು ತಿಳಿಸಿದರು.

* ಆಗಸ್ಟ್ 9 ರಂದು ಗದಗ ಜಿಲ್ಲಾ ಸಂಸ್ಥೆ ವತಿಯಿಂದ 1 ಕ್ವಿಂಟಾಲ್ ಅಕ್ಕಿಯನ್ನು ಗದಗ ಜಿಲ್ಲೆಯ ಮಳೆಯ ಪ್ರವಾಹದಿಂದ ಸಿಲುಕಿ ನೊಂದ ಸಂತ್ರಸ್ಥರಿಗೆ ಜಿಲ್ಲೆಯ ಪದಾಧಿಕಾರಿಗಳಿಂದ ನೀಡಲಾಯಿತು. ಶ್ರೀ ಜಿ.ಎಸ್. ಗೌಡರ, ಖಜಾಂಚಿ ಶ್ರೀ ಭರಮಗೌಡರ, ಉಪಾಧ್ಯಕ್ಷರು ಉಪಸ್ಥಿತರಿದ್ದರು.

* ಆಗಸ್ಟ್ 10ರಂದು ಗದಗ ಜಿಲ್ಲಾ ಸಂಸ್ಥೆಯಿಂದ ಶ್ರೀ ಎ.ಎಸ್. ಶಿವುಕುಮಾರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರವರ ನೇತೃತ್ವದಲ್ಲಿ ವಿವಿಧ ಕಾಲೇಜುಗಳ ರೋವರ್ಸ್‌ಗಳಿಂದ ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಸೇವೆಯನ್ನು ಸಲ್ಲಿಸಲಾಯಿತು.



## ಹಾಸನ

ಇಂದಿನ ಯುವಕರು ಸ್ವಾರ್ಥವನ್ನು ಬಿಟ್ಟು ದೇಶ ಸೇವೆ ಮಾಡಲು ಮುಂದಾಗಬೇಕು ಎಂದು ನಿವೃತ್ತ ಸೈನಿಕ ಶ್ರೀ ಮಂಜುನಾಥ್ ಅವರು ಹೇಳಿದರು. ಪಟ್ಟಣದ ಹಳೇ ಕರ್ನಾಟಕ ಬ್ಯಾಂಕ್ ರಸ್ತೆಯಲ್ಲಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸಭಾಂಗಣದಲ್ಲಿ 20ನೇ ಕಾರ್ಗಿಲ್ ವಿಜಯೋತ್ಸವ ಪ್ರಯುಕ್ತ ಆಯೋಜಿಸಿದ್ದ ಗೀತಗಾಯನ ಸ್ಪರ್ಧೆ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು. ಶಿಕ್ಷಣ ಇಲಾಖೆಯ ದೈಹಿಕ ನಿರ್ದೇಶಕ ಶ್ರೀ ನಾಗರಾಜ್ ರವರು ಮಾತನಾಡಿ ನಾವು ಸೈನ್ಯಕ್ಕೆ ಸೇರಿದ ಕುಟುಂಬದಲ್ಲಿ ಬೆಳೆದು ಬಂದಿದ್ದೇನೆ. ನೀವುಗಳು ಇಂದಿನ ಮಕ್ಕಳಿಗೆ ಕಾರ್ಗಿಲ್ ಯುದ್ಧದ ಬಗ್ಗೆ ಅರಿವು ಮೂಡಿಸಬೇಕು ಎಂದರು.

ವೀರಯೋಧರ ಸ್ಮರಣಾರ್ಥಕವಾಗಿ ಮೇಣದ ಬತ್ತಿ ಹಚ್ಚಿ ಗೌರವ ಸಲ್ಲಿಸಲಾಯಿತು.

ಗೀತ ಗಾಯನ ಸ್ಪರ್ಧೆಯಲ್ಲಿ ಎಂ.ಡಿ.ಆರ್.ಎಸ್.ಎಸ್. ಅಂಕನಹಳ್ಳಿ ಶಾಲೆ ಪ್ರಥಮ, ಹಳ್ಳಿ ಮೈಸೂರು ಅಂಬೇಡ್ಕರ್ ವಸತಿ ಶಾಲೆ ದ್ವಿತೀಯ ಹಾಗೂ ಜಿ.ಜಿ.ಹೆಚ್.ಎಸ್. ಶಾಲೆ ಹೊಳೆನರಸೀಪುರ ತೃತೀಯ ಬಹುಮಾನ ಪಡೆದರು.

ವೇದಿಕೆಯಲ್ಲಿ ಸ್ವಾಮಿ ವಿವೇಕಾನಂದ ಯುವ ವೇದಿಕೆ ಅಧ್ಯಕ್ಷ ಶ್ರೀ ರೆಹಮಾನ್, ಪುರಸಭಾ ಮಾಜಿ ಅಧ್ಯಕ್ಷ ಶ್ರೀ ಜನಾರ್ಧನ, ಸ್ಕೌಟ್ಸ್-ಗೈಡ್ಸ್‌ನ ಉಪಾಧ್ಯಕ್ಷೆ ಶ್ರೀಮತಿ ತ್ರಿಲೋಚನಾ ಸೋಮೇಶ್, ಶ್ರೀಮತಿ ಪ್ರೇಮಾ ಮಂಜುನಾಥ್, ಶ್ರೀಮತಿ ಟಿ.ಎನ್. ದಿವ್ಯಾ, ಆಕಾಶವಾಣಿ ಕಲಾವಿದ ಶ್ರೀ ಪಿ.ಸಿ. ಚನ್ನರಾಯಿ ಹಾಗೂ 90 ಸ್ಕೌಟ್‌ಗಳು ಹಾಜರಿದ್ದರು.



* ಜುಲೈ 6 ರಂದು ಜಿಲ್ಲಾ ಪ್ರಗತಿ ಪರಿಶೀಲನಾ ಸಭೆ ನಡೆಯಿತು. ಜಿಲ್ಲಾ ಕಾರ್ಯದರ್ಶಿ, ಶ್ರೀ ಸುರೇಶ್ ಗುರೂಜಿಯವರು ಎಲ್ಲರನ್ನು ಸ್ವಾಗತಿಸಿದರು. ಈ ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪನವರು ವಹಿಸಿದ್ದರು. ಈ ಸಭೆಗೆ ವೀಕ್ಷಕರಾಗಿ ಆಗಮಿಸಿದ ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಬಿ.ಕೆ. ಬಸವರಾಜ, ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಖಜಾಂಚಿ, ಮೈಸೂರು, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿ, ಮೈಸೂರು, ಶ್ರೀಮತಿ ಅರುಣಮಾಲ, ಎ.ಎಸ್.ಟಿ.ಸಿ., ಶ್ರೀಮತಿ ಕಮಲಮ್ಮ, ಎ.ಎಲ್.ಟಿ., ಚಾಮರಾಜನಗರ ಹಾಗೂ ಜಿಲ್ಲಾ ಉಪನಿರ್ದೇಶಕರಾದ ಶ್ರೀ ಮಂಜುನಾಥ್, ಡಯಟ್ ಪ್ರಾಂಶುಪಾಲರು ಮತ್ತು ಜಿಲ್ಲಾ ಪದಾಧಿಕಾರಿಗಳು ಗಿಡಕ್ಕೆ ನೀರೆರೆಯುವುದರ ಮೂಲಕ ಈ ಸಭೆಯನ್ನು ಉದ್ಘಾಟಿಸಿದರು.




ರಾಜ್ಯ ಸಂಸ್ಥೆಯವರು ಸೂಚಿಸಿರುವ ಎಲ್ಲಾ ವಿಷಯಗಳ ಬಗ್ಗೆ ಸುದೀರ್ಘ ಚರ್ಚೆ, ಜಿಲ್ಲೆಯ ಅಭಿವೃದ್ಧಿಯ ಬಗ್ಗೆ ಸಲಹೆ, ಮಾಹಿತಿ, ಮಾರ್ಗದರ್ಶನ, ರಾಜ್ಯ ಸಂಸ್ಥೆಯ ಕಾರ್ಯಕ್ರಮ, ಜಿಲ್ಲಾ ಸಂಸ್ಥೆಯ ಕಾರ್ಯಕ್ರಮ ತಾಲ್ಲೂಕು ಮಟ್ಟದ ಕಾರ್ಯಕ್ರಮಗಳು ಇನ್ನೂ ಮುಂತಾದ ಕಾರ್ಯಕ್ರಮಗಳ ಬಗ್ಗೆ ಚರ್ಚೆ ನಡೆಸಿದರು.

* ಜುಲೈ 11 ರಿಂದ 13 ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್ ತೃತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಆಯೋಜಿಸಲಾಗಿತ್ತು. ಈ ಪರೀಕ್ಷಾ ಶಿಬಿರವನ್ನು ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಅಕ್ರಂ ಪಾಶ ಇವರು ಉದ್ಘಾಟನೆ ಮಾಡಿ ಸ್ಕೌಟ್-ಗೈಡ್‌ಗಳಿಗೆ ಶುಭ ಹಾರೈಸಿ, ಜಲ ಸಂರಕ್ಷಣೆಯ ಬಗ್ಗೆ ಮಾಹಿತಿಯನ್ನು ನೀಡಿದರು. ಈ ಸಂಸ್ಥೆಗೆ ಬೇಕಾಗಿರುವ ಸೌಲಭ್ಯಗಳನ್ನು ನೀಡುವುದಾಗಿ ಭರವಸೆ ಕೊಟ್ಟರು. ಇದೇ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಡಾ. ನಾಗರಾಜ್ ರವರು ನೆಲ-ಜಲ ಸಂರಕ್ಷಣೆಯ ಬಗ್ಗೆ ಪೂರ್ಣ ಮಾಹಿತಿ ನೀಡಿ ಪಂಚಭೂತಗಳ ಮಹತ್ವ ತಿಳಿಸಿ ಸ್ಕೌಟ್-ಗೈಡ್‌ಗಳೊಂದಿಗೆ ಸಂವಾದ ನಡೆಸಿದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಡಾ. ವೈ.ಎಸ್. ವೀರಭದ್ರಪ್ಪ ಡಿ.ಸಿ.ಸಿ. ಶ್ರೀ ಪ್ರಕಾಶ್ ಎಸ್. ಯಾಜಿ ಡಿ.ಸಿ.(ಎಸ್.) ಕಾರ್ಯದರ್ಶಿಗಳಾದ ಶ್ರೀ ಸುರೇಶ್ ಗುರೂಜಿಯವರು ಉಪಸ್ಥಿತರಿದ್ದರು.



ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗದಿಂದ ಶ್ರೀ ಎಂ.ಎಸ್. ಪ್ರಕಾಶ್, ಶ್ರೀ ಗಂಗಾನಾಯಕ್, ಶ್ರೀ ಮಹಾಲಿಂಗೇಗೌಡರ ಕಾರ್ಯನಿರ್ವಹಿಸಿದರು. ಗೈಡ್ ವಿಭಾಗದಿಂದ ನಾಯಕಿಯಾಗಿ ಶ್ರೀಮತಿ ಬಿ.ಎಸ್. ಜನಜಾಕ್ಷಿ, ಎ.ಎಲ್.ಟಿ. ಕಾರ್ಯನಿರ್ವಹಿಸಿದರು.

* ಜುಲೈ 13 ರಂದು ಮಾಲೆಕಲ್ ತಿರುಪತಿ ಜಾತ್ರ ಮಹೋತ್ಸವವು ಅರಸೀಕೆರೆ ತಾಲ್ಲೂಕಿನ ಚಿಕ್ಕ ತಿರುಪತಿಯಲ್ಲಿ ನಡೆಯಿತು. ಈ ಜಾತ್ರಾ ಮಹೋತ್ಸವದಲ್ಲಿ ಅರಸೀಕೆರೆ ತಾಲ್ಲೂಕಿನ 120ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಿಕ್ಷಕರು ಭಾಗವಹಿಸಿ ಸ್ವಯಂ ಸೇವೆಯನ್ನು ಸಲ್ಲಿಸಿರುತ್ತಾರೆ.

* ಮನದ ಅಂಧಕಾರವನ್ನು ಹೋಗಲಾಡಿಸಿ ಜ್ಞಾನದ ಬೆಳಕನ್ನು ಮೂಡಿಸುವವನು ಗುರು. ಇಂದು ಗುರುಪೂರ್ಣಿಮೆ ಆಗಿರುವುದರಿಂದ ಎಲ್ಲಾ ಗುರುವೃಂದವರೆಗೂ ವಂದನೆಗಳು ಎಂದು ಡಾ. ವೈ.ಎಸ್. ವೀರಭದ್ರಪ್ಪನವರು ನುಡಿದರು.

ಜುಲೈ 16 ರಂದು ಭಾರತ್ ಸ್ಕೌಟ್ಸ್-ಗೈಡ್ಸ್‌ನ ತಾಲ್ಲೂಕು ಸಂಸ್ಥೆಯವರು ಆಯೋಜಿಸಿದ್ದ, ಪ್ರಾರಂಭಿಕ ಶಿಬಿರ ಹಾಗೂ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿಯವರು 2019-20ನೇ ಸಾಲಿನ ಯೋಜನಾ ಪುಸ್ತಕವನ್ನು ಬಿಡುಗಡೆಗೊಳಿಸಿ ಗುರುಶಿಷ್ಯರ ಮಹತ್ವವನ್ನು ಬೋಧಿಸುವ ಬುದ್ಧ ಮತ್ತು ಅವನ ಶಿಷ್ಯ ಆನಂದನ ಕಥೆಯೊಂದಿಗೆ ಎಲ್ಲರಿಗೂ ಶುಭಾಶಯ ಕೋರಿದರು. ಗೈಡ್ ಆಯುಕ್ತರಾದ ಶ್ರೀಮತಿ ಎಂ.ಬಿ. ಗಿರಿಜಾಂಬಿಕಾ ಹಾಗೂ ಜಿಲ್ಲಾ ಉಪಾಧ್ಯಕ್ಷರಾದ ಶ್ರೀಮತಿ ಜಯಾ ರಮೇಶ್ ರವರು ಗಿಡಕ್ಕೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು.

* ಸ್ಕೌಟ್ಸ್-ಗೈಡ್ಸ್‌ನ ಸಮವಸ್ತ್ರ ನೋಡಿದ ತಕ್ಷಣ ಬಾಲ್ಯದ ನೆನಪುಗಳು ಮರುಕಳಿಸುತ್ತವೆ ಎಂದು ಸಮನ್ವಯ ಅಧಿಕಾರಿಯಾದ ಶ್ರೀಮತಿ ಭಾನುಮತಿಯವರು ನುಡಿದರು. ಭಾರತ್ ಸ್ಕೌಟ್ಸ್-ಗೈಡ್ಸ್‌ನ ತಾಲ್ಲೂಕು ಸಂಸ್ಥೆಯವರು ಆಯೋಜಿಸಿದ್ದ ಪ್ರಾರಂಬಿಕ ಶಿಬಿರ ಮತ್ತು ಸಮಾವೇಶದ ಸಮಾರೋಪ ಸಮಾರಂಭದಲ್ಲಿ ಸ್ಕೌಟರ್ಸ್-ಗೈಡರ್ಸ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ ರವರು ಶಿಕ್ಷಕರಿಗೆ ಪುನಶ್ಚೇತನ ತರಬೇತಿಯಾಗಿದ್ದು, ಶಿಕ್ಷಕರು ಕಲಿತ ವಿಷಯಗಳನ್ನು ಪುನರ್ಮನನ ಮಾಡಿಕೊಂಡು ತಮ್ಮ ಘಟಕಗಳಲ್ಲಿ ಪ್ರಯೋಗಿಸಿ ಯಶಸ್ವಿಯಾಗಿ ತರಬೇತಿಗೊಳಿಸಬೇಕೆಂದು ತಿಳಿಸಿದರು. ಡಿಟಿಸಿಯವರಾದ ಶ್ರೀ ಎಂ. ಎಸ್. ಪ್ರಕಾಶ್ ರವರು ಕಾರ್ಯಕ್ರಮದ ವರದಿ ನೀಡಿದರು.

* ಜುಲೈ 19 ರಂದು ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ತಾಲ್ಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಹಾಗೂ ಪ್ರಾರಂಭಿಕ ಶಿಬಿರವನ್ನು ಆಯೋಜಿಸಿದ್ದರು. ಸದರಿ ಕಾರ್ಯಕ್ರಮವನ್ನು ಗಿಡಕ್ಕೆ ನೀರೆರೆಯುವುದರ ಮೂಲಕ ಜಿಲ್ಲಾ ಮುಖ್ಯ ಆಯುಕ್ತರು ಡಾ ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿಯವರು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪನವರು 2019-20ನೇ ಸಾಲಿನ ಯೋಜನಾ ಪುಸ್ತಕವನ್ನು ಬಿಡುಗಡೆ ಮಾಡಿ ಇದರ ಉದ್ದೇಶವನ್ನು ತಿಳಿಸಿದರು. ಶ್ರೀ ಎನ್. ಮೂರ್ತಿಯವರು ಎಲ್ಲರನ್ನು ಸ್ವಾಗತಿಸಿದರು ಸ್ಕೌಟ್ ಮಾಸ್ಟರ್ ಶ್ರೀ ದೇವರಾಜ್ ರವರು ವಂದಿಸಿದರು. ತಾಲ್ಲೂಕು ಮಟ್ಟದ ಸಮಾವೇಶ ಹಾಗೂ ಪ್ರಾರಂಭಿಕ ಶಿಬಿರವನ್ನು ಕಾರ್ಯದರ್ಶಿ ಶ್ರೀ ಕೆ. ಭರತ್ ರವರು ಸಂಘಟಿಸಿದರು.

## ಕಲಬುರಗಿ

ಆಗಸ್ಟ್ 3 ರಂದು ಗೀತಗಾಯನ ಸ್ಪರ್ಧೆಯನ್ನು ಪೂಜ್ಯ ದೊಡ್ಡಪ್ಪ ಅಪ್ಪಾ ಸಭಾ ಮಂಟಪ (ಎಸ್.ಬಿ.ಆರ್. ಶಾಲಾ ಆವರಣ ಕಲಬುರಗಿ) ದಲ್ಲಿ ಹಮ್ಮಿಕೊಳ್ಳಲಾಗಿತ್ತು ಈ ಕಾರ್ಯಕ್ರಮಕ್ಕೆ ಉದ್ಘಾಟಕರಾಗಿ ಶ್ರೀ ಚನ್ನಬಸಪ್ಪ ಮುಧೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು (ಕಲಬುರಗಿ ಉ.ವ.) ವಹಿಸಿಕೊಂಡಿದ್ದರು. ಶ್ರೀ ಎನ್. ಎಸ್. ದೇವರಕಲ್, ಪ್ರಾಚಾರ್ಯರು ಎಸ್.ಬಿ.ಆರ್. ಶಾಲೆ, ಕಲಬುರಗಿ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ವೀರಣ್ಣಾ ಬೊಮ್ಮನಹಳ್ಳಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಲಬುರಗಿ ದಕ್ಷಿಣ ಇವರು ಆಗಮಿಸಿದ್ದರು. ಶ್ರೀ ವಿಶ್ವನಾಥ ಕಟ್ಟಿಮನಿ, ಅಧ್ಯಕ್ಷರು, ಕ.ರಾ.ಪ್ರಾ.ಶಾ.ಶಿ. ಸಂಘ ಜಿಲ್ಲಾ ಘಟಕ, ಕಲಬುರಗಿ ಮತ್ತು ಶ್ರೀಮತಿ ಸುಜಾತಾ ಇ.






ಮುಲ್ಲಾ, ಜಿಲ್ಲಾ ಆಯುಕ್ತರು ಗೈಡ್ ವಿಭಗ, ಕಲಬುರಗಿ ಶ್ರೀ ಅಯ್ಯಪ್ಪ ಅಂಬರಖೇಡ, ಜಿಲ್ಲಾ ಖಜಾಂಚಿ, ಭಾರತ್ ಸ್ಕೌಟ್ಸ್-ಗೈಡ್ಸ್ ಕಲಬುರಗಿ ಇವರುಗಳು ಅತಿಥಿ ಸ್ಥಾನವನ್ನು ಅಲಂಕರಿಸಿದ್ದರು. ಶ್ರೀ ಚನ್ನವೀರಯ್ಯ ಸ್ವಾಮಿ, ಜಿಲ್ಲಾ ಕಾರ್ಯದರ್ಶಿಗಳು, ಸ್ವಾಗತಿಸಿದರು. ಶ್ರೀ ಚನ್ನಬಸಪ್ಪ ಮುಧೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಲಬುರಗಿ(ಉ) ಇವರ ಜೊತೆಯಲ್ಲಿ ವೇದಿಕೆ ಯಲ್ಲಿದ್ದ ಎಲ್ಲಾ ಅತಿಥಿಗಳು ದೀಪ ಬೆಳಗಿಸುವುದರೊಂದಿಗೆ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಶ್ರೀಮತಿ ಸುಜಾತಾ. ಇ. ಮುಲ್ಲಾ, ಜಿಲ್ಲಾ ಆಯುಕ್ತರು ಗೈಡ್ ವಿಭಾಗ ಇವರು ಗೀತ ಗಾಯನ ಸ್ಪರ್ಧೆಯ ಮಹತ್ವ ಮತ್ತು ಅದರ ಉದ್ದೇಶಗಳು ಕುರಿತು ಮಾತನಾಡಿದರು. ಕಾರ್ಯಕ್ರಮವನ್ನು ಉದ್ಘಾಟಿಸಿದ ಶ್ರೀ ಚನ್ನಬಸಪ್ಪಾ ಮುಧೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಉತ್ತರ ವಲಯ, ಕಲಬುರಗಿ ಇವರು ಈ ಗೀತಗಾಯನ ಸ್ಪರ್ಧೆ ಮಕ್ಕಳಲ್ಲಿರುವ ಪ್ರತಿಭೆಯನ್ನು ಗುರುತಿಸುವ ಕಾರ್ಯಕ್ರಮ ಇದಾಗಿದ್ದು, ಪಠ್ಯದ ಜೊತೆಗೆ ಪಠ್ಯೇತರ ಚಟುವಟಿಕೆ ಆಗಿದ್ದು, ಮಕ್ಕಳು ತಮ್ಮಲ್ಲಿರುವ ಗಾಯನವನ್ನು ಪ್ರದರ್ಶಿಸುವುದರ ಜೊತೆಗೆ ದೇಶ ಪ್ರೇಮ ಮತ್ತು ದೇಶದ ಸಂಸ್ಕೃತಿಯನ್ನು ಉಳಿಸಿ, ಬೆಳೆಸುವ ಜವಾಬ್ದಾರಿ ಮಕ್ಕಳ ಮೇಲೆ ಇದೆ ಎಂದು ಹೇಳಿದರು.

ಅತಿಥಿಗಳಾಗಿ ಮಾತನಾಡಿದ ಶ್ರೀ ವೀರಣ್ಣಾ ಬೋಮನಳ್ಳಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಲಬುರಗಿ (ದಕ್ಷಿಣ) ಇವರು ಭಾರತ ಸ್ಕೌಟ್ಸ್ ಮತ್ತು ಗೈಡ್ಸ ಸಂಸ್ಥೆ, ಮಕ್ಕಳಿಗೆ ಉತ್ತಮ ನಾಗರಿಕರನ್ನಾಗಿ ಮಾಡುವ ಕೆಲಸ ಮಾಡುತ್ತಿದೆ. ಇದರ ಧ್ಯೇಯ ಉದ್ದೇಶವೇ 'ಸೇವೆಗಾಗಿ ಬಾಳು' ಎನ್ನುವ ಹಾಗೆ ಇಲ್ಲಿರುವ ಪ್ರತಿಯೊಬ್ಬ ಮಗುವು ಭಾರತ ದೇಶವನ್ನು ಮುನ್ನಡೆಸುವ ಮಹಾನ್ ಪ್ರಜೆಯಾಗಿ ಹೊರ ಹೊಮ್ಮಲಿ ಎಂದು ಹೇಳಿದರು.

ಶ್ರೀ ವಿಶ್ವನಾಥ ಕಟ್ಟಿಮನಿ, ಅಧ್ಯಕ್ಷರು, ಕ.ರಾ.ಪ್ರೌ.ಶಾ.ಶಿ. ಸಂಘ, ಕಲಬುರಗಿ ಇವರು ಮಾತನಾಡುತ್ತಾ, ಉನ್ನತ ಅಭ್ಯಾಸದೊಂದಿಗೆ, ಸಹಪಠ್ಯ ಚಟುವಟಿಕೆಗಳಲ್ಲಿ ಒಂದಾದ 'ಗೀತ ಗಾಯನ ಸ್ಪರ್ಧೆ' ಮಕ್ಕಳಲ್ಲಿರುವ ಪ್ರತಿಭೆಯನ್ನು ಗುರುತಿಸುವ ಕೆಲಸ ಮಾಡುವಂತಹ ಸ್ಪರ್ಧೆಯಾಗಿದೆ ಎಂದರು.

ಶ್ರೀ ಮಲ್ಲಯ್ಯ ಗುತ್ತೇದಾರ, ಅಧ್ಯಕ್ಷರು ಕ.ರಾ.ಪ್ರಾ.ಶಾ.ಶಿ. ಸಂಘ, ಕಲಬುರಗಿ ಇವರು ಮಾತನಾಡುತ್ತಾ, ಸಂಗೀತದಲ್ಲಿ ನಮ್ಮ ರಾಜ್ಯಕ್ಕೆ ಮತ್ತು ರಾಷ್ಟ್ರಕ್ಕೆ ಹೆಸರುವಾಸಿಯಾದ, ಪುಟ್ಟರಾಜ ಗವಾಯಿಗಳ ಉದಾಹರಣೆ ಹಾಗೂ ನಟಸಾರ್ವಭೌಮ ಡಾ. ರಾಜಕುಮಾರ ರವರ ಅಭಿನಯ ಹಾಗೂ ಸಂಗೀತದಿಂದ ಅವರು ರಾಷ್ಟ್ರ ಮಟ್ಟದಲ್ಲಿಯೇ ಪರಿಚಿತರಾಗಿರುವ ಹಾಗೆ ತಾವುಗಳು (ಮಕ್ಕಳು) ಸಹ ಅಂತಹ ವ್ಯಕ್ತಿಗಳಾಗಿ ಹೊರಹೊಮ್ಮಿ ಎಂದು ಹಾರೈಸಿದರು.

ಈ ಸ್ಪರ್ಧೆಯ ನಿರ್ಣಯಕಾರರಾಗಿ ಶ್ರೀ ಬಾಬುರಾವ ಕೋಬಾಳೆ, ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು, ಕರ್ನಾಟಕ ಸರ್ಕಾರ, ಶ್ರೀ ಬಸ್ಸಯ್ಯ ಗುತ್ತೇದಾರ, ದೂರದರ್ಶನ ಸಂಗೀತ ಕಲಾವಿದರು ಹಾಗೂ ಶ್ರೀ ಸಿದ್ದಾರ್ಥ ಚಿಮ್ಮಾ ಇದಲಾಯಿ, ಖ್ಯಾತ ಆಕಾಶವಾಣಿ ಸಂಗೀತ ಕಲಾವಿದರು ಕಾರ್ಯನಿರ್ವಹಿಸಿದರು. ಶ್ರೀ ಪೀರಪ್ಪ ಹುನಗುಂದರವರು ಕಾರ್ಯನಿರೂಪಿಸಿದರು.

## ಕೊಡಗು

ಜೂನ್ 11 ಮತ್ತು 12 ರಂದು ಶ್ರೀ ಪ್ರಭಾಕರ್ ಕಲ್ಕುರೆಯವರ ನೇತೃತ್ವದಲ್ಲಿ ಪ್ರಕೃತಿ ವಿಪತ್ತು ನಿರ್ವಹಣಾ ತರಬೇತಿ ಶಿಬಿರವು ನಡೆಯಿತು. ಹಾಗೆಯೇ ಈ ಎರಡು ದಿನದ ಕಾರ್ಯಾಗಾರದಲ್ಲಿ ಎಸ್.ಪಿ.ಯಾದಂತಹ ಶ್ರೀಮತಿ ಸುಮನ್ ಡಿ. ಪಡ್ನೆಕರ್, ಡಿ.ಡಿ.ಪಿ.ಐ., ಶ್ರೀ ಪೆರಿಗ್ರೀನ್ ಮಚ್ಚಾಡೋ ರವರು ಭಾಗವಹಿಸಿದ್ದರು.

* ಜೂನ್ 21 ರಂದು ಜಿಲ್ಲಾ ಸಂಸ್ಥೆ ಕೊಡಗು, ಮಡಕೇರಿ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರ ಸಾಮಾಜಿಕ ಶಿಕ್ಷಣ ಇಲಾಖೆ, ಅರಣ್ಯ ಇಲಾಖೆ ಹಾಗು ಸಂತ ಜೋಸೆಫರ ವಿದ್ಯಾಸಂಸ್ಥೆ ಮಡಿಕೇರಿ ಇವರ ಸಂಯುಕ್ತ ಆಶ್ರಯದಲ್ಲಿ "ವಿಶ್ವಯೋಗ ದಿನಾಚರಣೆ" ಹಾಗೂ "ವಿಶ್ವ ಪರಿಸರ ದಿನಾಚರಣೆ"ಯನ್ನು ಆಚರಿಸಲಾಯಿತು.

ಕಾರ್ಯಕ್ರಮದಲ್ಲಿ ಸುಮಾರು 300-350 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀಮತಿ ನೂರುನ್ನೀಸ. ಜಿಲ್ಲಾ ಹಿರಿಯ ನ್ಯಾಯಾಧೀಶರು ಸದಸ್ಯ ಕಾರ್ಯದರ್ಶಿಗಳು ಮಾಡಿದರು. ಶ್ರೀ ಕೆ.ಬಿ. ಕಾಳಪ್ಪ ಜಿಲ್ಲಾ ಪ್ರಧಾನ ಆಯುಕ್ತರು ಸ್ವಾಗತ ಭಾಷಣ ಮಾಡಿದರು. 2019-20ನೇ ಸಾಲಿನ ಯೋಜನಾ ಪುಸ್ತಕವನ್ನು ಶ್ರೀಮತಿ ಗಾಯತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಬಿಡುಗಡೆ ಮಾಡಿದರು.

* ಜುಲೈ 22 ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬೇಳೂರು ಬಾಣಿ, ಇಲ್ಲಿ ಬೀಜ ಬಿತ್ತುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದಲ್ಲಿ ಶ್ರೀ ಲಕ್ಷ್ಮೀಕಾಂತ್, ವಲಯ ಅರಣ್ಯಾಧಿಕಾರಿಗಳು ಅರಣ್ಯದ ಉಳಿವು ಮತ್ತು ಅಳಿವು ಹಾಗೂ ಬೀಜ ಬಿತ್ತುವ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ತಿಳಿಸಿದರು.

* ಇತ್ತೀಚೆಗೆ ಕೊಡಗಿನಲ್ಲಾದ ಪ್ರಕೃತಿ ವಿಕೋಪದ ಸಂದರ್ಭದಲ್ಲಿ ಶ್ರೀ ವನಿತ್‌ಕುಮಾರ್, ಕಾಕೋಟು ಸರಂಬು, ನೆಲ್ಲಿ ಹುದಿಕೇರಿ, ಕರಡಿಗೋಳು ರೋನ ಲೀಡರ್ ಹಾಗೂ ಶ್ರೀಮತಿ ದಮಯಂತಿ ಇವರ ನೇತೃತ್ವದಲ್ಲಿ, ಮಡಿಕೇರಿ, ಹೊದವಾಡ, ವಾಟೆಕಾಡು, ಮೂರ್ನಾಡುಬಕಾಕೋಟು ಸರಂಬು, ನೆಲ್ಲಿ ಹುದಿಕೇರಿ, ಕರಡಿಗೋಡು, ವಿರಾಜಪೇಟೆ, ರಾಮನಗರ, ಹೆಗ್ಗಳ ಪರಿಹಾರ ಕೇಂದ್ರಗಳಲ್ಲಿ ನಿರಾಶ್ರಿತರಿಗೆ ಸಾಮಾಗ್ರಿಗಳ ವಿತರಣೆ, ಅಡುಗೆ ತಯಾರಿಸುವಲ್ಲಿ ಮುಂತಾದ ಕಾರ್ಯಗಳಲ್ಲಿ ರೋವರ್‌ಗಳು ಸಾಕಷ್ಟು ಸೇವೆ ಸಲ್ಲಿಸಿ ಜಿಲ್ಲಾಡಳಿತದಿಂದ ಮೆಚ್ಚುಗೆ ಪಡೆದರು. ಅಲ್ಲದೆ ಪ್ರಕೃತಿ ವಿಕೋಪದಿಂದ ಆಗುವ ಅನಾಹುತಗಳ ಬಗ್ಗೆ ಜನರಿಗೆ ಜಾಗೃತಿ ಮೂಡಿಸಲಾಯಿತು.





## ಕೊಪ್ಪಳ

ಜುಲೈ 23 ರಂದು 2019-20ನೇ ಸಾಲಿನ ಯಲಬುರ್ಗಾ ತಾಲೂಕ ಮಟ್ಟದ ಗೀತಗಾಯನ ಸ್ಪರ್ಧೆಯನ್ನು ಕಿತ್ತೂರ ರಾಣಿ ಚೆನ್ನಮ್ಮ ವಸತಿ ಶಾಲೆ ಹೊಸಹಳ್ಳಿಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಕಾಂತ ಮಾಸಗಟ್ಟಿ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಕೊಪ್ಪಳ ಇವರು ನೆರವೇರಿಸಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಮಕ್ಕಳಿಗೆ ಜೀವನ ಶಿಕ್ಷಣದ ಜೊತೆಗೆ ಆತ್ಮ ವಿಶ್ವಾಸ, ರಾಷ್ಟ್ರೀಯ ಮನೋಭಾವನೆಯನ್ನು ಮೂಡಿಸುವ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ ಎಂದು ತಿಳಿಸಿದರು. ಶ್ರೀ ವಿರುಪಾಕ್ಷಪ್ಪ ಹನುಮಶೆಟ್ಟಿ, ಪ್ರಾಚಾರ್ಯರು ಹಾಗೂ ಉಪಾಧ್ಯಕ್ಷರು, ತಾಲೂಕ ಸಂಸ್ಥೆ, ಯಲಬುರ್ಗಾ ಇವರು ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದಲ್ಲಿ 11 ಸ್ಕೌಟ್ಸ್ ತಂಡಗಳು ಮತ್ತು 12 ಗೈಡ್ಸ್ ತಂಡಗಳು ಭಾಗವಹಿಸಿದ್ದರು.



## ಕೋಲಾರ

ಜೂನ್ 20 ರಂದು ಕೋಲಾರನಗರದ ಪತ್ರಕರ್ತರ ಭವನದಲ್ಲಿ ಸುದ್ಧಿಗೋಷ್ಠಿ ನಡೆಸಲಾಯಿತು. 2019-2020ನೇ ಸಾಲಿನ ವಾರ್ಷಿಕ ಯೋಜನೆ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪರವರು ಮಾತನಾಡಿ ಜಿಲ್ಲೆಯ ಕಾರ್ಯಕ್ರಮಗಳು ಹಾಗೂ ವಾರ್ಷಿಕ ಯೋಜನೆಯ ಬಗ್ಗೆ ತಿಳಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

* ಜೂನ್ 21 ರಂದು ವಿಶ್ವ ಯೋಗ ದಿನಾಚರಣೆಯನ್ನು ಜಿಲ್ಲಾಡಳಿತ ಸಹಯೋಗದಲ್ಲಿ ಶ್ರೀ ವಿಶ್ವೇಶ್ವರಯ್ಯ ಜಿಲ್ಲಾ ಕ್ರೀಡಾಂಗಣದಲ್ಲಿ ಆಚರಿಸಲಾಯಿತು. 173 ಕಬ್-ಬುಲ್‌ಬುಲ್, ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್‌ಗಳು ಭಾಗವಹಿಸಿದ್ದರು. ಉಪನಿರ್ದೇಶಕರ ಕಛೇರಿ ಆವರಣದಲ್ಲಿ

ಸ್ವಚ್ಛತೆಯನ್ನು ಮಾಡಿ ಹಾಗೂ 30 ಗಿಡಗಳನ್ನು ನಾಟಿ ಮಾಡಲಾಯಿತು.

* ಜೂನ್ 21 ರಿಂದ 23 ರ ವರೆಗೆ ಜಿಲ್ಲಾ ಮಟ್ಟದ ರಾಜ್ಯ ಪುರಸ್ಕಾರ ಪೂರ್ವ ಸಿದ್ಧತಾ ಶಿಬಿರವನ್ನು ಸ.ಹಿ.ಪ್ರಾ.ಶಾಲೆ ಸೀತಿ ಕೋಲಾರ ಇಲ್ಲಿ ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ 56 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದಲ್ಲಿ 154 ಸಸಿಗಳನ್ನು ನಾಟಿಮಾಡಲಾಯಿತು.

* ಜೂನ್ 30ರಂದು ಕಛೇರಿ ಆವರಣದಲ್ಲಿ ವಾರಂತ್ಯ ಶಿಬಿರವನ್ನು ಆಯೋಜಿಸಲಾಗಿತ್ತು. ಪ್ರಾವೀಣ್ಯತಾ ಪದಕಗಳ ಬಗ್ಗೆ ಮತ್ತು ಲಾಗ್ ಪುಸ್ತಕ ಬರೆಯುವ ಬಗ್ಗೆ ತಿಳಿಸಲಾಯಿತು. ಈ ಶಿಬಿರದಲ್ಲಿ 69 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜುಲೈ 3ರಂದು ಕೋಲಾರ ನಗರದ ಒಕ್ಕಲಿಗರ ವಿದ್ಯಾರ್ಥಿನಿಲಯ ಇಲ್ಲಿ ಜಿಲ್ಲಾ ಪ್ರಗತಿ ಪರಿಶೀಲನಾ ಸಭೆಯನ್ನು ಜಿಲ್ಲಾ ಮುಖ್ಯ ಆಯುಕ್ತಾದ ಶ್ರೀ ಕೆ.ವಿ. ಶಂಕರಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ರಾಜ್ಯ ಸಂಸ್ಥೆಯಿಂದ ಸಭೆಗೆ ಶ್ರೀ ಎಂ.ಕೆ. ಖಾನ್ ಜಿಲ್ಲಾ ಮುಖ್ಯ ಆಯುಕ್ತರು, ಬೆಂಗಳೂರು ದಕ್ಷಿಣ ಜಿಲ್ಲೆ ಶ್ರೀ ಪಳನಿ, ಜಿಲ್ಲಾ ಸ್ಥಾನಿಕ ಆಯುಕ್ತರು, ಬೆಂಗಳೂರು ದಕ್ಷಿಣ ಜಿಲ್ಲೆ ಮತ್ತು ಶ್ರೀಮತಿ ಬಿ. ರೇವತಿ, ಎ.ಎಸ್.ಸಿ ರವರು ಆಗಮಿಸಿದ್ದರು. ಈ ಸಭೆಯಲ್ಲಿ ರಾಜ್ಯ ಸಂಸ್ಥೆಯಿಂದ ನೀಡಿದ ಮಾರ್ಗದರ್ಶನದಂತೆ 2018-2019ನೇ ಸಾಲಿನ ಸಮಗ್ರ ಮಾಹಿತಿ, ವರದಿ ಹಾಗೂ 2019-20ನೇ ಸಾಲಿನ ಕಾರ್ಯಕ್ರಮಗಳ ಬಗ್ಗೆ ಚರ್ಚೆ ಮಾಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಜರಿದ್ದರು.

ಜುಲೈ 6ರಂದು ಕೋಲಾರನಗರದ ಶ್ರೀ ಸೋಮೇಶ್ವರಸ್ವಾಮಿ ದೇವಾಲಯದ ಆವರಣದಲ್ಲಿರುವ ಕಲ್ಯಾಣಿಯನ್ನು ಸ್ವಚ್ಛತೆ ಮಾಡಲಾಯಿತು. ಈ ಸೇವಾ ಶಿಬಿರದಲ್ಲಿ ಸುಮಾರು 80 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಜಂಟಿ ಕಾರ್ಯದರ್ಶಿ ಶ್ರೀಮತಿ ಉಮಾದೇವಿ, ಜಿಲ್ಲಾ ಸಂಘಟಕರಾದ ಶ್ರೀ ವಿ. ಬಾಬು, ವಿಶ್ವನಾಥ ಸ್ಕೌಟ್ಸ್ ಮಾಸ್ಟರ್‌ಗಳಾದ ಶ್ರೀ ಚೇತನ್, ಶ್ರೀ ನಿರಂಜನ್ ಕುಮಾರ್, ಶ್ರೀಪುರುಷೋತ್ತಮರೆಡ್ಡಿ, ಶ್ರೀ ಕಿಶೋರ್ ಮುಂತಾದವರು ಭಾಗವಹಿಸಿದ್ದರು.

* ಜುಲೈ 6ರಂದು ಕೋಲಾರ ಕಛೇರಿ ಆವರಣದಲ್ಲಿ ಅಡುಗೆ ತಯಾರಿಕೆ ಪ್ರಾವೀಣತಾ ಪದಕ ತರಬೇತಿಯನ್ನು ಆಯೋಜಿಸಲಾಗಿತ್ತು. ಸ್ಕೌಟ್ಸ್-ಗೈಡ್ಸ್‌ಗಳು ಸುಧಾರಿತ ಗುಡಾರವನ್ನು ಹಾಕಿ ವಿವಿಧ ರೀತಿಯ ಅಡುಗೆಯನ್ನು ತಯಾರಿಸಿದ್ದರು.

* ಜುಲೈ 8 ಮತ್ತು 10 ರಂದು ಜಿಲ್ಲಾ ಸಂಸ್ಥೆ ಕೋಲಾರ ಮತ್ತು ಸ್ಥಳೀಯ ಸಂಸ್ಥೆ ಬಂಗಾರಪೇಟೆ ಸಂಯುಕ್ತ ಆಶ್ರಯದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು ಆವರಣ, ಬಂಗಾರಪೇಟೆ ಇಲ್ಲಿ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರಕ್ಕೆ ಬಿ.ಇ.ಓ. ಶ್ರೀ ಕೆಂಪಯ್ಯರವರು ಚಾಲನೆ ನೀಡಿ ಮಾತನಾಡಿ ಬಂಗಾರಪೇಟೆ ವಲಯದ ಎಲ್ಲಾ ಶಾಲೆಗಳಲ್ಲಿ ಕಡ್ಡಾಯವಾಗಿ ಘಟಕಗಳನ್ನು ಪ್ರಾರಂಭಿಸಲು ತೀರ್ಮಾನಿಸಲಾಗಿದೆ ಎಂದು ತಿಳಿಸಿದರು. 2 ದಿನಗಳ ಪ್ರಾರಂಭಿಕ ಶಿಬಿರಗಳಲ್ಲಿ ಕ್ರಮವಾಗಿ ಕಿರಿಯ ಪ್ರಾಥಮಿಕ ಶಾಲೆಯಿಂದ 64 ಮತ್ತು ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆಗಳಿಂದ 42 ಶಿಕ್ಷಕರು ಭಾಗವಹಿಸಿದ್ದರು.

* ಜುಲೈ 13 ರಂದು ಕೆ.ಜಿ.ಎಫ್ ಚಿನ್ನದ ಗಣಿ ಪ್ರದೇಶದಲ್ಲಿ ಬೀಜಬಿತ್ತನೆ ಕಾರ್ಯಕ್ರಮವನ್ನು ಅರಣ್ಯ ಇಲಾಖೆ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಕೋಲಾರ ಜಿಲ್ಲೆ ರವರ ಆಶ್ರಯದಲ್ಲಿ ಆಯೋಜಿಸಲಾಗಿತ್ತು. ಸುಮಾರು 15000 ಬೀಜಗಳನ್ನು ಬಿತ್ತನೆ ಮಾಡಲಾಯಿತು. ಈ ಕಾರ್ಯಕ್ರಮದಲ್ಲಿ ಸುಮಾರು 450 ಕ್ಕು ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮಕ್ಕೆ ಸಾಮಾಜಿಕ ಅರಣ್ಯಾಧಿಕಾರಿಗಳಾದ ಶ್ರೀ ದೇವರಾಜ್ ಚಾಲನೆ ನೀಡಿದರು. ಈ ಕಾರ್ಯಕ್ರಮದಲ್ಲಿ ಸಂಸ್ಥೆಯ ಸ್ಥಾನಿಕ ಆಯುಕ್ತ ಶ್ರೀ ಕೆ.ಎನ್. ತ್ಯಾಗರಾಜ್ ಜಿಲ್ಲಾ ಸಂಘಟಕರಾದ ಶ್ರೀ ವಿ. ಬಾಬು, ಶ್ರೀ ವಿಶ್ವನಾಥ ವಿ. ಜಿಲ್ಲಾ ಯುವ ಸಮಿತಿಯ ಶ್ರೀಮತಿ ಭಾರ್ಗವಿ ರೆಡ್ಡಿ, ಎಲ್.ಡಿ.ಸಿ. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸುಬ್ರಮಣಿ, ಅರಣ್ಯ ಇಲಾಖೆಯ ಶ್ರೀಮತಿ ಸಾವಿತ್ರಮ್ಮ, ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಭಾಗವಹಿಸಿದ್ದರು.

* ಜುಲೈ 14 ರಿಂದ 16ರ ವರೆಗೆ ಕೋಲಾರ-ಚಿಕ್ಕಬಳ್ಳಾಪುರ ಜಿಲ್ಲೆಯ ಪ್ರಸಿದ್ಧ ಇತಿಹಾಸವಿರುವ ಶ್ರೀ ಕ್ಷೇತ್ರ ಕೈವಾರದಲ್ಲಿ ಪ್ರತಿ ವರ್ಷದಂತೆ ಈ ವರ್ಷವೂ ಸಹ ಗುರುಪೂಜಾ-ಸಂಗೀತೋತ್ಸವದಲ್ಲಿ ಕೋಲಾರ ಜಿಲ್ಲೆಯ 88 ರೋವರ್-ರೇಂಜರ್‌ಗಳು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ 5 ರೇಂಜರ್ಸ್ ಸೇವೆ ಸಲ್ಲಿಸಿದರು. ಈ ಶಿಬಿರದಲ್ಲಿ ದೇವಾಲಯ, ಅಡುಗೆಮನೆ, ಸಭಾಂಗಣ, ವೇದಿಕೆ, ನೋಂದಣೆ ಮುಂತಾದ ಸ್ಥಳಗಳಲ್ಲಿ ಸೇವೆಯನ್ನು ಸಲ್ಲಿಸಿದರು.



ಉತ್ತಮ ಸೇವೆ ಸಲ್ಲಿಸಿದ ಎಲ್ಲಾ ಸ್ಕೌಟ್ಸ್-ಗೈಡ್ಸ್ ಸ್ವಯಂಸೇವರಿಗೆ ಶ್ರೀ ಕ್ಷೇತ್ರ ಕೈವಾರದ ಧರ್ಮಾಧಿಕಾರಿಗಳಾದ ಡಾ. ಎಂ.ಆರ್. ಜಯರಾಮ್ ರವರು ಕ್ಷೇತ್ರದ ವತಿಯಿಂದ ಪ್ರಮಾಣ ಪತ್ರ ನೀಡಿದರು.

* ಜುಲೈ 17 ಮತ್ತು 18ರಂದು ಮುಳಬಾಗಿಲು ಬಿ.ಆರ್.ಸಿ. ಕಛೇರಿ ಆವರಣದಲ್ಲಿ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್ ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದರು.

* ಜುಲೈ 18ರಂದು ಮಾಲೂರು ಸ್ಥಳೀಯ ಸಂಸ್ಥೆ ವತಿಯಿಂದ ಸ್ವಚ್ಛ ಭಾರತ್ ಅಭಿಯಾನ ಕಾರ್ಯಕ್ರಮದಡಿಯಲ್ಲಿ ಮಾಲೂರು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆವರಣವನ್ನು ಸ್ವಚ್ಛತೆ ಮಾಡಲಾಯಿತು. ಈ ಅಭಿಯಾನಕ್ಕೆ ಬಿ.ಇ.ಓ. ಶ್ರೀ ಮಾದವರೆಡ್ಡಿ ಚಾಲನೆ ನೀಡಿದರು. 68 ರೋವರ್ಸ್-ರೇಜರ್ಸ್ ಭಾಗವಹಿಸಿದ್ದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ರಾಜಪ್ಪ, ಬಿ.ಆರ್.ಪಿ. ನಂಜುಂಡಗೌಡ ಇತರರು ಭಾಗವಹಿಸಿದ್ದರು.



* ಜುಲೈ 24 ರಂದು ಚಾಮುಂಡೇಶ್ವರ ಜನ್ಮದಿನೋತ್ಸವದ ಪ್ರಯುಕ್ತ ಕೋಲಾರ ತಾಲ್ಲೂಕಿನ ಲಕ್ಷ್ಮೀಸಾಗರ ಗ್ರಾಮದಲ್ಲಿ ಸೇವೆ ಸಲ್ಲಿಸಲಾಯಿತು.

* ಜುಲೈ 27 ರಂದು ಕೋಲಾರ ನಗರದ ಮೊಥಾಡಿಸ್ಟ್ ಶಾಲೆಯಲ್ಲಿ ಪದವಿ ಮತ್ತು ಪದವಿ ಪೂರ್ವ ಉಪನ್ಯಾಸಕರಿಗೆ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರದಲ್ಲಿ 44 ಉಪನ್ಯಾಸಕರು ಭಾಗವಹಿಸಿದ್ದರು.

* ಜುಲೈ 27 ರಂದು ಕೋಲಾರ ತಾಲ್ಲೂಕಿನ ವಕ್ಕಲೇರಿ ಶ್ರೀ ಮಾರ್ಕಂಡೇಶ್ವರ ಬೆಟ್ಟದಲ್ಲಿ ಸ್ವಚ್ಛ ಭಾರತ್ ಅಭಿಯಾನ ಮತ್ತು ಬೀಜದುಂಡೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮಕ್ಕೆ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ಚೌಡೇಶ್ವರಿ ರಾಮು ಚಾಲನೆ ನೀಡಿದರು.

* ಜುಲೈ 31ರಂದು ಶ್ರೀನಿವಾಸಪುರ ಸ್ಥಳೀಯ ಸಂಸ್ಥೆ ವತಿಯಿಂದ ತಾಲ್ಲೂಕು ಮಟ್ಟದ ಗೀತಗಾಯನ ಸ್ಪರ್ಧೆಯನ್ನು ಬಿ.ಇ.ಓ. ಕಛೇರಿ ಆವರಣದಲ್ಲಿ ಆಯೋಜಿಸಲಾಗಿತ್ತು. ಬಿ.ಇ.ಓ. ಶ್ರೀಮತಿ ರೇಣುಕಮ್ಮ ಚಾಲನೆ ನೀಡಿದರು. ಬಿ.ಆರ್.ಸಿ. ಸಮನ್ವಯಾಧಿಕಾರಿಗಳಾದ ಶ್ರೀಮತಿ ವಸಂತ ಹಾಗೂ ಇತರರು ಭಾಗವಹಿಸಿದ್ದರು.



## ಮೈಸೂರು

ಸ್ಕೌಟ್ಸ್‌ನ ಮೂಲ ಉದ್ದೇಶ ಮಾನವೀಯ ಸೇವೆ, ಶಾಂತಿ, ನಾಯಕತ್ವದಗುಣ, ಪ್ರಕೃತಿ ಸಂರಕ್ಷಣೆ ಹಾಗೂ ವಿದ್ಯಾರ್ಥಿಗಳನ್ನು ಉತ್ತಮ ನಾಗರೀಕರನ್ನಾಗಿ ರೂಪಿಸುವುದು ಮತ್ತು ಜೀವನದ ಕೌಶಲ್ಯಗಳನ್ನು ಕಲ್ಪಿಸಿ ಕೊಡುವುದಾಗಿದೆ ಎಂದು ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಸಂಘಟನಾ ಆಯುಕ್ತರಾದ (ನಿ) ಶ್ರೀಮತಿ ಜಾನಕಿ ವೇಣುಗೋಪಾಲ್‌ರವರು ತಿಳಿಸಿದರು.

ಜೂನ್ 26ರಂದು ನಗರದ ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜಿನಲ್ಲಿ ಏರ್ಪಡಿಸಿದ್ದ 2019-20ನೇ ಸಾಲಿನ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ರೋವರ್-ರೇಂಜರ್ ದಳದ ಕಾರ್ಯಚಟುವಟಿಕೆಗಳ ಉದ್ಘಾಟನಾ ಸಮಾರಂಭದಲ್ಲಿ ಉದ್ಘಾಟಕರಾಗಿ ಭಾಗವಹಿಸಿ ಅವರು ಮಾತನಾಡುತ್ತಿದ್ದರು.









ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಹಾಗೂ ವಿದ್ಯಾವರ್ಧಕ ಸಂಘದ ಗೌ. ಕಾರ್ಯದರ್ಶಿಗಳಾದ ಶ್ರೀ ಪಿ. ವಿಶ್ವನಾಥ್ ಮಾತನಾಡುತ್ತಾ ಸ್ಕೌಟ್ಸ್ ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ನೆರವಾಗುವುದು ಮಾತ್ರವಲ್ಲದೆ ಬದುಕಿನ ಕೌಶಲ್ಯಗಳನ್ನು ಸಾಹಸ ಕ್ರೀಡೆಗಳ ಮೂಲಕ ಕಲಿಸುವುದು ಮತ್ತು ಅದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬಹುದಾಗಿದೆ ಎಂದು ಶಿಬಿರಾರ್ಥಿಗಳಿಗೆ ಕಿವಿ ಮಾತು ಹೇಳಿದರು.

ರೋವರ್ ಸ್ಕೌಟ್ ಲೀಡರ್ ಆದ ಪ್ರೊ. ಆರ್. ಅರವಿಂದ್ ಸ್ವಾಗತ ಮಾಡಿದರೆ ಕಾಲೇಜಿನ ಪ್ರಾಂಶುಪಾಲರಾದ ಡಾ. ಎಸ್. ಮರೀಗೌಡರವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಕಾರ್ಯಕ್ರಮದಲ್ಲಿ ಸಂಸ್ಥೆಯ ಕೋಶಾಧ್ಯಕ್ಷರಾದ ಶ್ರೀ ಶೈಲರಾಮಣ್ಣನವರ್ ಹಾಗೂ ಕಾಲೇಜು ನಿರ್ವಹಣಾ ಮಂಡಳಿ ಅಧ್ಯಕ್ಷರಾದ ಶ್ರೀ ಟಿ. ನಾಗರಾಜು, ಭಾರತ್ ಸ್ಕೌಟ್ಸ್ – ಗೈಡ್ಸ್ ಮೈಸೂರು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಅಬ್ದುಲ್ ಜಮೀಲ್ ರವರು ಹಾಗೂ ರೇಂಜರ್ ಲೀಡರ್ ಪ್ರೊ. ಮುಬಿನ್ ತಾಜ್ ಅವರು ಉಪಸ್ಥಿತರಿದ್ದರು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ಹಿದಾಯತ್ ನಡೆಸಿಕೊಟ್ಟರೆ ಶ್ರೀ ಜುನೈದ್ ಪಾಷ ಖಾದ್ರಿ ವಂದಿಸಿದರು.

## ಉಡುಪಿ

ಆಗಸ್ಟ್ 2 ರಂದು ಕಮಲ ಬಾಯಿ ಹೈಸ್ಕೂಲ್‌ನಲ್ಲಿ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ಸ್ಕೌಟರ್‌ಗಳ ಸಮಾವೇಶವು ನಡೆಯಿತು. ಉಡುಪಿ ಜಿಲ್ಲಾ ಶಿಕ್ಷಣ ಇಲಾಖೆಯ ಐದು ವಲಯಗಳ ಶಿಕ್ಷಣಾಧಿಕಾರಿಗಳು, ಜಿಲ್ಲಾ ಉಪನಿರ್ದೇಶಕರು ಹಾಗೂ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಭಾಗವಹಿಸಿದ್ದರು. ಉಪನಿರ್ದೇಶಕರು ಹಾಗೂ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಎಲ್ಲಾ ಶಾಲೆಗಳಲ್ಲಿ ಕಡ್ಡಾಯವಾಗಿ ಸ್ಕೌಟ್ಸ್–ಗೈಡ್ಸ್ ದಳ ಹೊಂದಿರಬೇಕು ಹಾಗೂ ಚಟುವಟಿಕೆಯಿಂದ ಕೂಡಿರಬೇಕು ಎಂಬ ನಿರ್ಣಯವನ್ನು ಕೈಗೊಳ್ಳಲಾಯಿತು.

ಸಮಾವೇಶದ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಡ್ವಿನ್ ಆಳ್ವರವರು ವಹಿಸಿದ್ದರು. ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯಾಗಿ ಶ್ರೀ ಮೂರ್ತಿ ನಾಯ್ಕಪ್‌ನವರು ಮಾತನಾಡಿ, ಸ್ಕೌಟ್ಸ್–ಗೈಡ್ಸ್ ಸಂಸ್ಥೆಯು ಮಕ್ಕಳಲ್ಲಿ ಸರ್ವಾಂಗೀಣ ಬೆಳವಣಿಗೆಗೆ ಕಾರಣವಾಗಿದೆ ಎಂದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಐ.ಕೆ. ಜಯಚಂದ್ರರವರು ಸ್ವಾಗತಿಸಿದರು. ವೇದಿಕೆಯಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಡಾ। ವಿಜಯೇಂದ್ರ ವಸಂತ್, ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಜ್ಯೋತಿ ಜೆ.ಪೈ.ಶಾಲಾ ಮುಖ್ಯ ಶಿಕ್ಷಕ ಶ್ರೀ ಗಣೇಶ್ ಮೂರ್ತಿ ಹೆಬ್ಬಾರ್, ಜಿಲ್ಲಾ ಸಹ ಆಯುಕ್ತರಾದ ಶ್ರೀ ಶೇಖರ್ ಪೂಜಾರಿ ಉಪಸ್ಥಿತರಿದ್ದರು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ಬಿ. ಆನಂದ ಅಡಿಗ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ನೀಡಿದರು. ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಶ್ರೀಮತಿ ಸಾವಿತ್ರಿ ಮನೋಹರ್ ಎಲ್ಲರಿಗೂ ಧನ್ಯವಾದ ಸಲ್ಲಿಸಿದರು. ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಮತ್ತು ಶ್ರೀಮತಿ ಸುಮನ್ ಶೇಖರ್ ಕಾರ್ಯಕ್ರಮ ಸಂಘಟಿಸಿದರು.

## ವಿಜಯಪುರ

ಜೂನ್ 31ರಂದು ಸರ್ಕಾರಿ ಬಾಲಕರ ಪ್ರೌಢಶಾಲೆಯ ಗ್ಯಾಲರಿ ಹಾಲ್ ವಿಜಯಪುರ ಇಲ್ಲಿ ಸ್ಕೌಟ್ ಶಿಕ್ಷಕ, ಗೈಡ್ ಶಿಕ್ಷಕಿಯರ ಪುನಶ್ಚೇತನ ಕಾರ್ಯಕ್ರಮ ಉದ್ಘಾಟನೆಯನ್ನು ಜಿಲ್ಲಾ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಡಿ.ಎ. ಪಿಂಜಾರ್ ರವರು ನೆರವೇರಿಸಿದರು. ಶಿಕ್ಷಕರು ಹೆಚ್ಚಿನ ಪ್ರಮಾಣದಲ್ಲಿ ಸ್ಕೌಟ್ಸ್–ಗೈಡ್ಸ್ ಚಳುವಳಿಯಲ್ಲಿ ತೊಡಗಿಕೊಳ್ಳಲು ಕರೆ ನೀಡಿದರು. ವಲಯದ ವಿವಿಧ ಶಾಲೆಗಳ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಭಾಗವಹಿಸಿದ್ದರು. ಎಸ್.ಜಿ.ವಿ. ಶ್ರೀ ರಾಜಶೇಖರ ಖೇಡಗಿ ಮಾತನಾಡಿ ಮುಂದೆ ನಡೆಯುವ ತರಬೇತಿ ಕಾರ್ಯಕ್ರಮಗಳ ಸಂಪೂರ್ಣ ವಿವರವನ್ನು ತಿಳಿಸಿದರು. ವಿಜಯಪುರ ನಗರ ವಲಯದ ಕಾರ್ಯದರ್ಶಿಗಳಾದ ಶ್ರೀ ಅಶೋಕ ಚಳ್ಳಗಿಯವರು ಕಾರ್ಯಕ್ರಮವನ್ನು ನಿರೂಪಿಸಿದರು. ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ಎಸ್.ಎಸ್. ಪಾಟೀಲ ಸ್ವಾಗತಿಸಿದರು. ಶ್ರೀ ಸಂಗಮೇಶ ಹಲಗಣಿ ಅವರು ವಂದಿಸಿದರು.

* ಜುಲೈ 29ರಂದು ಇಂಡಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದ ಆವರಣದಲ್ಲಿರುವ ಗುರು ಭವನದಲ್ಲಿ ತಾಲೂಕಿನ ಎಲ್ಲ ಸರಕಾರಿ, ಅನುದಾನಿತ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮುಖ್ಯ ಶಿಕ್ಷಕರಿಗೆ ಒಂದು ದಿನದ ಸ್ಕೌಟ್ಸ್-ಗೈಡ್ಸ್‌ನ ಮಾಹಿತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಮಾರಂಭದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್. ಬಿ. ಬಿಂಗೇರಿ, ಕ್ಷೇತ್ರ ಸಮನ್ವಯಾಧಿಕಾರಿಗಳಾದ ಶ್ರೀ ಸಿ.ಎಂ. ಬಂಡಗರ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಸಹಾಯ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾಗೇಶ ಶಿವಪುರ, ತಾಲ್ಲೂಕಾ ಕಾರ್ಯದರ್ಶಿಗಳಾದ ಶ್ರೀ ಎಸ್.ಬಿ. ಪಾಟೀಲ, ಸ್ಕೌಟ್ ಮಾಸ್ಟರುಗಳಾದ ಶ್ರೀ ವಾಯ್ ಜಿ. ಬಿರಾದಾರ, ಶ್ರೀ ಡಿ.ಜಿ. ಕೊಳಾರಿ, ಶ್ರೀ ಹನುಮಂತಪ್ಪ ಟಿ, ಶ್ರೀ ಎ.ಎ. ಇಕ್ಕಳಕಿ ಹಾಗೂ ಶ್ರೀ ಬಿ.ಆರ್.ಪಿ. ಶ್ರೀ ಬಿ.ಐ. ಗೊರನಾಳ ಇವರು ಉಪಸ್ಥಿತರಿದ್ದರು.

* 73ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಯಪುರದ ಸ್ಕೌಟ್ಸ್ ಭವನದ ಮುಂಭಾಗದಲ್ಲಿ ಆಚರಿಸಲಾಯಿತು. ಧ್ವಜಾರೋಹಣ ಕಾರ್ಯಕ್ರಮವನ್ನು ಜಿಲ್ಲಾ ಸಹಕಾರ್ಯದರ್ಶಿಗಳಾದ ಶ್ರೀ ಶರಣು ಸಬರದ ರವರು ನೆರವೇರಿಸಿದರು. ಜಿಲ್ಲಾ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ. ಸಕ್ರಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಎಎಸ್‌ಓಸಿ ಶ್ರೀ ನಾಗೇಶ ಶಿವಪೂರ, ಎಸ್.ಜಿ.ವಿ. ಶ್ರೀ ರಾಜಶೇಖರ ಖೇಡಗಿ, ಸ್ಕೌಟ್ ಮಾಸ್ಟರ್ ಶ್ರೀ ಸಂಗಮೇಶ್ ಹಲಗಣಿ, ಚಂದ್ರಕಾಂತ ವಡ್ಡರ ಗೈಡ್ ಕ್ಯಾಪ್ಟನ್ ಶ್ರೀಮತಿ ಪ್ರೀತಿ ಕಾಳೆ, ಶ್ರೀಮತಿ ಕುಲಕರ್ಣಿ, ಕು. ಅಶ್ವಿನಿ ಚೋರಗಿ ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಗೈಡ್ ಕ್ಯಾಪ್ಟನ್ ಶ್ರೀಮತಿ ಪ್ರೀತಿ ಕಾಳೆಯವರು ಎಲ್ಲ ಅತಿಥಿಗಳಿಗೆ ರಾಖಿ ಕಟ್ಟುವುದರ ಮೂಲಕ ರಕ್ಷಾಬಂಧನವನ್ನು ಆಚರಿಸಿದರು.



* ಆಗಸ್ಟ್ 8 ರಿಂದ 18 ರ ವರೆಗೆ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಕಮಲದಿನ್ನಿ, ಗಂಗೂರು, ಕುಂಚಗನೂರು ಗ್ರಾಮಗಳಲ್ಲಿ ಪ್ರವಾಹ ಸಂತ್ರಸ್ಥರಗಾಗಿ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ತಂಗಡಗಿಯಲ್ಲಿ ಗಂಜೀಕೇಂದ್ರ ತೆರೆಯಲಾಗಿತ್ತು. ಸದರಿ ಗಂಜಿ ಕೇಂದ್ರದಲ್ಲಿ ಸರಕಾರಿ ಪ್ರೌಢಶಾಲೆ ತಂಗಡಗಿಯ ಸುಭಾಷ್ಚಂದ್ರ ಭೋಸ್ ಸ್ಕೌಟ್ಸ್ ಟ್ರೂಪ್‌ನ ಸ್ಕೌಟ್ಸ್-ಸ.ಹಿ.ಪ್ರಾ.ಶಾಲೆ ತಂಗಡಗಿ ಶಾಲೆಯ ಸ್ಕೌಟ್‌ಗಳು ಮುದ್ದೇಬಿಹಾಳ ಕಾರ್ಯದರ್ಶಿಗಳಾದ ಶ್ರೀ ದತ್ತಾತ್ರೇಯ ಕಠಾರೆಯವರ ನೇತೃತ್ವದಲ್ಲಿ ಸೇವೆ ಸಲ್ಲಿಸಿದ್ದಾರೆ.

* ಜಿಲ್ಲಾಡಳಿತ ಹಾಗೂ ಜಿಲ್ಲಾ ಸಶಸ್ತ್ರ ಮೀಸಲು ಪಡೆ ವಿಜಯಪುರ, ಆಯೋಜಿಸಿದ 73ನೇ ಸ್ವಾತಂತ್ರ್ಯ ದಿನಾಚರಣೆಯ ಪಥಸಂಚಲನದಲ್ಲಿ ಜಿಲ್ಲೆಯ ಸರಕಾರಿ ಹೆಣ್ಣು ಮಕ್ಕಳ ಹಿರಿಯ ಪ್ರಾಥಮಿಕ ಶಾಲೆ ನಂ. 11 ಶಿವಾಜಿ ಚೌಕ್ ವಿಜಯಪುರ, ಎಕ್ಸಲೆಂಟ್ ಕನ್ನಡ ಮತ್ತು ಆಂಗ್ಲಮಾಧ್ಯಮ ಶಾಲೆ ಇಟ್ಟಂಗಿಹಾಳ, ಸರಾಸರಿ ಹೆಣ್ಣು ಮಕ್ಕಳ ಹಿರಿಯ ಪ್ರಾಥಮಿಕ ಶಾಲೆ ತೊರವಿ, ಸೇಂಟ್ ಜೋಸೆಫ್ ಶಾಲೆ ವಿಜಯಪುರ, ಪಿ.ಡಿ.ಜೆ.ಎ. ಶಾಲೆ ವಿಜಯಪುರ. ಶಲೆಗಳ ಒಟ್ಟು 5 ತಂಡಗಳಲ್ಲಿ 110 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ. ಸಕ್ತಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಎ.ಎಸ್.ಓ.ಸಿ., ಶ್ರೀ ನಾಗೇಶ ಶಿವಪೂರ, ಎಸ್.ಜಿವಿ. ಶ್ರೀ ರಾಜಶೇಖರ ಖೇಡಗಿ ಉಪಸ್ಥಿತರಿದ್ದರು.



## ಯಾದಗಿರಿ

73ನೇ ಸ್ವಾತಂತ್ರ್ಯೋತ್ಸದ ಅಂಗವಾಗಿ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಶಹಾಪುರದ ಆದರ್ಶ ವಿದ್ಯಾಲಯ ಶಾಲೆಯ ಸ್ಕೌಟ್ಸ್‌ಗಳು, ಸರಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್-ರೇಂಜರ್ಸ್‌ಗಳು, ಶಹಾಪುರ ನಗರದ ಬೀದಿಯಲ್ಲಿ, ವ್ಯಾಪಾರ ಮಳಿಗೆಗಳಿಗೆ ತೆರಳಿ ನೆರೆ ಸಂತ್ರಸ್ಥರ ಪರಿಹಾರ ನಿಧಿಸಂಗ್ರಹಿಸಿದರು. ಈ ಕಾರ್ಯದಲ್ಲಿ 30 ಸ್ಕೌಟ್ಸ್ 20 ರೋವರ್ಸ್ ಹಾಗೂ 15 ರೇಂಜರ್ಸ್‌ಗಳು ಭಾಗವಹಿಸಿದ್ದರು. ಕಾರ್ಯದರ್ಶಿಗಳಾದ ಶ್ರೀ ಬವರಾಜ ಗೋಗಿ, ಶ್ರೀ ಸುಧಾಕರ ಗುಡಿ, ಜಿಲ್ಲಾ ಉಪಾಧ್ಯಕ್ಷರು, ಶ್ರೀ ವಿಜಯ ಬಿ.ಹೆಚ್. ಸ್ಕೌಟ್ ಮಾಸ್ಟರ್ ಶ್ರೀ ಚಂದ್ರಶೇಖರ ವೈದ್ಯ ಟಿ.ಪಿ.ಇ.ಓ. ಭಾಗವಹಿಸಿದ್ದರು.

# ಅಸಿಡಿಟಿ



– ಡಾ. ವಸುಂಧರಾ ಭೂಪತಿ
ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ

ಇತ್ತೀಚಿನ ದಿನಗಳಲ್ಲಿ ಮಕ್ಕಳಿಂದ ವಯಸ್ಕರ ವರೆಗೂ ಎದೆಯುರಿ (ಅಸಿಡಿಟಿ) ಸಮಸ್ಯೆ ತುಂಬ ಸಾಮಾನ್ಯವಾಗಿದೆ. ಅಸಿಡಿಟಿಗೆ ಮುಖ್ಯ ಕಾರಣ ಬದಲಾದ ಆಹಾರ ಪದ್ಧತಿ, ಮಸಾಲೆ ಪದಾರ್ಥ, ಕರಿದ, ಹುರಿದ ಪದಾರ್ಥಗಳ ಅಧಿಕ ಸೇವನೆ, ಸಮಯಕ್ಕೆ ಸರಿಯಾಗಿ ಊಟಮಾಡದಿರುವುದು, ಜೀರ್ಣಿಸಲು ಕಷ್ಟವಾದ ಆಹಾರ ಪದಾರ್ಥಗಳ ಸೇವನೆ, ಅತಿಯಾದ ಬೀಡಿ, ಸಿಗರೇಟು, ತಂಬಾಕು ಸೇವನೆ, ಮದ್ಯಪಾನ, ನಿದ್ರೆಗೆಡುವುದು, ರಾತ್ರಿಪಾಳಿಗಳಲ್ಲಿ ಕೆಲಸ ಮಾಡುವುದು, ಅಧಿಕ ಮಾನಸಿಕ ಒತ್ತಡ ಮುಂತಾದವುಗಳು.

ಅಸಿಡಿಟಿ ಇರುವಾಗ ಹುಳಿತೇಗು, ಮಲಬದ್ಧತೆ, ಹೊಟ್ಟೆನೋವು, ತಲೆಸುತ್ತುವುದು, ಎದೆಯಲ್ಲಿ ಉರಿ, ಹೊಟ್ಟೆಯಲ್ಲಿ ಉರಿ, ಹೊಟ್ಟೆಯಲ್ಲಿ ಸಂಕಟವೆನಿಸುವುದು, ವಾಕರಿಕೆ ಬಂದಂತಾಗುವುದು ಮುಂತಾದ ಲಕ್ಷಣಗಳು ಕಂಡುಬರುತ್ತವೆ.

**ಪರಿಹಾರ :**

ನೀರು ಕುಡಿಯುವುದು : ಕಾಯಿಸಿ, ಆರಿಸಿದ ನೀರನ್ನು ಹೆಚ್ಚು ಕುಡಿಯಬೇಕು.

ಜೀರಿಗೆ ನೀರು : ಒಂದು ಲೀಟರ್ ನೀರಿಗೆ ಅರ್ಧ ಚಮಚೆ ಜೀರಿಗೆ ಹಾಕಿ ಕಾಯಿಸಿದ ನೀರನ್ನು ಆಗಾಗ ಕುಡಿಯುತ್ತಿರಬೇಕು.

ದ್ರವಾಹಾರ : ಎಳನೀರು ಗಂಜಿ, ಪಾಯಸ, ಬಾರ್ಲಿ ಗಂಜಿ, ಸಿಹಿ ಮಜ್ಜಿಗೆ, ಶುಂಠಿ ಬೆರೆಸಿದ ಮಜ್ಜಿಗೆ ಕುಡಿಯಬೇಕು

ಭತ್ತದ ಅರಳು : ಭತ್ತದ ಅರಳನ್ನು ಹಾಲು, ಬೆಲ್ಲ ಬೆರೆಸಿ ಸೇವಿಸಬೇಕು.

**ಮನೆ ಮದ್ದು :**



* ಒಂದು ಚಮಚೆ ಹಸಿಶುಂಠಿ ರಸಕ್ಕೆ ಒಂದು ಚಮಚೆ ಜೇನುತುಪ್ಪ ಬೆರೆಸಿ ಸೇವಿಸಬೇಕು.
* ಪುದೀನಾ ಸೊಪ್ಪಿನ ರಸಕ್ಕೆ ಅಷ್ಟೇ ಪ್ರಮಾಣದ ಜೇನುತುಪ್ಪ ಬೆರೆಸಿ ಸೇವಿಸಬೇಕು.
* ನೆಲ್ಲಿಕಾಯಿ ಪುಡಿ 2 ಚಮಚೆ, ಜೀರಿಗೆ ಪುಡಿ ಅರ್ಧ ಚಮಚ, ಕಲ್ಲುಸಕ್ಕರೆ ಬೆರೆಸಿ ದಿನಕ್ಕೆರಡು ಬಾರಿ ಸೇವಿಸಬೇಕು.
* 4 ಚಮಚೆ ಧನಿಯಾ ಕುಟ್ಟಿ ಒಂದು ಲೋಟ ನೀರಿಗೆ ಹಾಕಿ ಕಷಾಯ ತಯಾರಿಸಿ ಹಾಲು, ಬೆಲ್ಲ ಬೆರೆಸಿ ಕುಡಿಯಬೇಕು.
* ಕಿರುಕಸಾಲೆ, ಹೊನಗೆನ್ನೆ ಸೊಪ್ಪು, ನೆಲನೆಲ್ಲಿ ಎಲೆ, ಮೆಂತ್ಯ ಸೊಪ್ಪು, ದಂಟಿನ ಸೊಪ್ಪು, ಚಕ್ಕೋತ ಸೊಪ್ಪು ಎಲ್ಲವನ್ನೂ ಸಮ ಪ್ರಮಾಣ ತೆಗೆದುಕೊಂಡು ನೆರಳಿನಲ್ಲಿ ಒಣಗಿಸಬೇಕು. ಒಣಗಿದ ಎಲೆಗಳನ್ನು ನುಣ್ಣಗಿನ ಪುಡಿ ಮಾಡಿ ತೆಗೆದಿಟ್ಟುಕೊಳ್ಳಬೇಕು. ಪ್ರತಿದಿನ ಒಂದು ಚಮಚೆ ಪುಡಿಯನ್ನು ಒಂದು ಲೋಟ ನೀರಿನಲ್ಲಿ ಹಾಕಿ ಕುಡಿಯಬೇಕು.
* ಬೇಲದ ಹಣ್ಣಿನ ತಿರುಳಿಗೆ ಏಲಕ್ಕಿ ಪುಡಿ ಮತ್ತು ಬೆಲ್ಲ ಬೆರೆಸಿ ತಿನ್ನಬೇಕು.
* ಸಿಹಿ ದಾಳಿಂಬೆ ರಸ, ಪುದೀನಾ ಸೊಪ್ಪಿನ ರಸ, ಹಸಿಶುಂಠಿ ರಸಕ್ಕೆ ಜೇನುತುಪ್ಪ ಬೆರೆಸಿ ಕುಡಿಯಬೇಕು.
* ಅರ್ಧ ಚಮಚೆ ಅಜವಾನದ ಪುಡಿ, ಅರ್ಧ ಚಮಚೆ ಜೀರಿಗೆ ಪುಡಿ, ಸ್ವಲ್ಪ ಉಪ್ಪು ಬಿಸಿನೀರಿಗೆ ಬೆರೆಸಿ, ಹಸಿಶುಂಠಿ, ನಿಂಬೆರಸ ಮತ್ತು ಪುದೀನಾ ರಸ ಬೆರೆಸಿ ದಿನಕ್ಕೆ ಮೂರು ಬಾರಿ ಕುಡಿಯಬೇಕು.






# ಬೆಳಕಿನಲೆಯ ಮೇಲೆ ತೇಲಿ

- ಜಿ.ಎನ್. ನರಸಿಂಹಮೂರ್ತಿ
ಕಾರ್ಯದರ್ಶಿ, ಕನ್ನಡ ಗಣಕಪರಿಷತ್, ಬೆಂಗಳೂರು

ಉಪಗ್ರಹಗಳನ್ನು ಉಡ್ಡಯನ ಮಾಡಿರುವುದು ಎಲ್ಲರಿಗೆ ಗೊತ್ತಿರುವ ಸಂಗತಿಯೇ ಸರಿ. ಅವನ್ನು ಹಾರಿ ಬಿಡಲು ಮತ್ತು ಅವುಗಳು ಕಕ್ಷೆಯಲ್ಲಿ ಸುಸ್ಥಿರವಾಗಿ ಇರಿಸಲು ಅಪಾರ ಪ್ರಮಾಣದಶಕ್ತಿ ಬೇಕಾಗುತ್ತದೆ. ಅಕಸ್ಮಾತ್ ಅಪಾರವಾಗಿ ಲಭ್ಯವಿರುವ ಬೆಳಕಿನ ಅಲೆಗಳು ಅಥವಾ ಕಣಗಳು ಆ ಕೆಲಸವನ್ನು ಮಾಡಿದರೆ ಹೇಗೆ? ಇಂತಹ ಆಲೋಚನೆಗಳು ಪ್ರಾರಂಭವಾಗಿ ಅನೇಕ ವರ್ಷಗಳೇ ಸಂದಿವೆ.

ಆದರೆ ಈಗ ಜಪಾನ್ ಮತ್ತು ಅಮೆರಿಕಾದ ಎರಡು ಉಪಗ್ರಹಗಳು ಬೆಳಕನ್ನೇ ಶಕ್ತಿಯ ಮೂಲವನ್ನಾಗಿಸಿಕೊಂಡು ಉಪಗ್ರಹಗಳ ಚಲನೆಯನ್ನು ತನಗೆ ಬೇಕಾದ ಹಾಗೆ ನಿಯಂತ್ರಣದಲ್ಲಿರಿಸಿಕೊಳ್ಳಲು ಸಾಧ್ಯವಾಗಿರುವುದು ಉಪಗ್ರಹ ಚಾಲನೆ ಮತ್ತು ಅಂತರ ಗ್ರಹ ಪ್ರಯಾಣಗಳ ವಿಷಯದಲ್ಲಿ ಹೊಸ ಸಾಧ್ಯತೆಗಳನ್ನು ತಂದಿಟ್ಟಿದೆ.

2010ರಲ್ಲಿ ಜಪಾನು IKAROS (Interplanetary Kite-craft Accelerated by Radiation Of the Sun) ಎಂಬ ಉಪಗ್ರಹವನ್ನು ಎಂದಿನ ರೀತಿಯಲ್ಲಿ ಹಾರಿ ಬಿಟ್ಟಿತು. ಒಮ್ಮೆ ಭೂಸ್ಥಿರ ಕಕ್ಷೆಯನ್ನು ತಲುಪಿದ ಮೇಲೆ ಅದು ಸೂರ್ಯನ ಬೆಳಕಿನ ಕಣಗಳ ಒತ್ತಡದಲ್ಲಿಯೇ ಮುಂದುವರೆಯಿತು. ಇಲ್ಲಿ ಒತ್ತಡವೆಂದರೆ ಉಪಗ್ರಹದ ಮೇಲೆ ಸತತವಾಗಿ ಬೀಳುವ ಬೆಳಕಿನ ಕಣಗಳ ತಾಡನ ಎಂದರ್ಥ.







展開手順・機構
Deployment sequence and mechanism

ಹೀಗೆ ಸೂರ್ಯನ ಬೆಳಕಿನ ಕಣಗಳು ಯಾವುದೇ ಆಕಾಶಕಾಯವನ್ನು ಚಲಿಸಬಲ್ಲವು ಎಂಬುದು ನಿರ್ವಿವಾದವಾಗಿ ಸಾಬೀತಾಗಿದೆ. ಇಕಾರೋಸ್ ಉಪಗ್ರಹ ಕಕ್ಷೆಯಲ್ಲಿ ಬದಲಾವಣೆ ಮಾಡಿಕೊಳ್ಳಲು ಅಥವಾ ದಿಕ್ಕು ಬದಲಿಸಿಕೊಳ್ಳಲು ಯಾವುದೇ ಇಂಧನವನ್ನು ಬಳಸಲಿಲ್ಲ ಎಂಬುದು ಹೊಸ ಸಾಧ್ಯತೆಗಳನ್ನು ನಮ್ಮ ಮುಂದೆ ತೆರೆದಿಡುತ್ತದೆ.

ಇರಲಿ, ಈಗ ಇನ್ನೊಂದು ಉಪಗ್ರಹ ಬೆಳಕಿನ ಕಣಗಳೊಟ್ಟಿಗೆ ಅಂತರಿಕ್ಷದಲ್ಲಿ ಸುತ್ತುತ್ತಿದೆ. ಅದೆ ಸೋಲಾರ್ ಸೈಲ್. ಅಂದರೆ ಕನ್ನಡದಲ್ಲಿ ಸೌರ ಇಕರಸ್ ಉಪಗ್ರಹ ನಾವೆ ಎನ್ನಬಹುದು. ಇದನ್ನು ಹಾರಿಬಿಟ್ಟಿದ್ದು ಅಮೆರಿಕದ ಪ್ಲಾನೆಟರಿ ಸೊಸೈಟಿ.

ಇದು ಒಂದು ಸಾಮೂಹಿಕ ಪ್ರಯತ್ನ. ಪ್ಲಾನೆಟರಿ ಸೊಸೈಟಿ ಒಂದು ಸ್ವಯಂ ಸೇವಾ ಸಂಘಟನೆ. ಇದರಲ್ಲಿ ಐವತ್ತು ಸಾವಿರ ಸದಸ್ಯರಿದ್ದಾರೆ. ಸೋಲಾರ್ ಸೈಲ್ ಅನ್ನು ಭೂಕಕ್ಷೆಗೆ ಸೇರಿಸಲು ತಗಲಿದ ವೆಚ್ಚ ಎಪ್ಪತ್ತು ದಶಲಕ್ಷ ಡಾಲರುಗಳು. ಇದನ್ನೆಲ್ಲ ಸದಸ್ಯರೇ ತುಂಬಿಕೊಟ್ಟಿದ್ದಾರೆ. ಸೋಲಾರ್ ಸೈಲ್ ಉಪಗ್ರಹದ ಗಾತ್ರ ಚಿಕ್ಕದು. ಕ್ಯೂಬ್ ಸ್ಯಾಟ್ ಎನ್ನುವ ವರ್ಗದ ಉಪಗ್ರಹ. 0.5 ಘನ ಅಡಿ ಯಿಂದ ಹಿಡಿದು 27 ಘನ ಅಡಿಯ ವರೆಗಿನ ಗಾತ್ರದ ಮಾನವನಿರ್ಮಿತ ಆಕಾಶಕಾಯಗಳನ್ನು ಕ್ಯೂಬ್ ಸ್ಯಾಟ್ ಎಂದು ಕರೆಯುತ್ತಾರೆ. ಇದಕ್ಕೂ ಮಾನದಂಡಗಳನ್ನು ನಿರ್ಧರಿಸಲಾಗಿದೆ. ಒಂದು ಘನ ಅಡಿಯ ಕ್ಯೂಬ್ ಸ್ಯಾಟ್ ಅನ್ನು 1 ಕ್ಯೂಬ್ ಸ್ಯಾಟ್ ಎಂದು ಕರೆಯುತ್ತಾರೆ. ಇಂತಹ ಉಪಗ್ರಹಕ್ಕೆ ಬಿಚ್ಚಿಕೊಳ್ಳುವ ವಿಸ್ತಾರವಾದ ಗಾಳಿಪಟದಂತಿರುವ ಸೂಕ್ಷ್ಮ ಪರದೆಯಂತಹ ವ್ಯವಸ್ಥೆ ಜೋಡಣೆಯಾಗಿರುತ್ತದೆ. ಇದರಲ್ಲಿ ಥಿನ್ ಫಿಲ್ಮ್ (Thin film) ಸೌರಕೋಶಗಳೂ ಇರುತ್ತದೆ. ಉಪಗ್ರಹ ಭೂಮಿಯಿಂದ ಹಾರಿ ಕಕ್ಷೆಯಲ್ಲಿ ನೆಲೆಗೊಂಡ ನಂತರ ಅದನ್ನು ಇನ್ನೂ ಎತ್ತರದ ಕಕ್ಷೆಗೆ ಸೇರಿಸಲು ಅಥವಾ ಅದರ ದಿಕ್ಕು ಮತ್ತು ವೇಗವನ್ನು ಬದಲಾಯಿಸಲು ಸೌರಕಣಗಳ ತಾಡನವನ್ನು ಬಳಸಿಕೊಂಡಿದೆ. ಸೌರಕೋಶಗಳು ಉಪಗ್ರಹದ ಬೇರೆ ಕೆಲಸಗಳನ್ನು ನಿರ್ವಹಿಸಲು ಬಳಕೆಯಾಗುತ್ತವೆ. ಇಂತಹ ಹೊಸ ಶೋಧನೆಗಳು ನಮ್ಮನ್ನು ಎತ್ತ ಕರೆದೊಯ್ಯುತ್ತವೋ ಕಾಲವೇ ನಿರ್ಧರಿಸಬೇಕು. ಅಲ್ಲಿಯತನಕ ವಿಸ್ಮಯದಲ್ಲಿ ಅವನ್ನು ನೋಡುತ್ತಿರುವುದರಲ್ಲಿಯೇ ಆನಂದವಿದೆ.

SOLAR SAIL DEPLOYED

5.6 x 5.6 m (18.4 x 18.4 ft) | 4 m (13 ft) | 32 m² (344 ft²) | Boxing Ring



ಸೌರನಾವೆಯೊಂದಿಗೆ ಕ್ಯೂಬ್ ಸ್ಯಟ್ ಉಪಗ್ರಹ

# ಕಣ್ಣಿನ ದೃಷ್ಟಿ ಕಡಿಮೆ ಆದರೂ ಖಗೋಳ ವಿಜ್ಞಾನಿಯಾದ!

– ಚಳ್ಳಕೆರೆ ಯರ್ರಿಸ್ವಾಮಿ
ಜಿಲ್ಲಾ ಸ್ಕೌಟ್ ಆಯುಕ್ತರು, ಚಿತ್ರದುರ್ಗ

ಗೆಳೆಯರೆ, ಈತ 'ಜೋಹಾನೆಸ್ ಕೆಪ್ಲರ್', ಕ್ರಿ.ಶ. 1571 ರಲ್ಲಿ ದಕ್ಷಿಣ ಜರ್ಮನಿಯ 'ವೀಲ್' ಎಂಬಲ್ಲಿ ಹುಟ್ಟಿದ. ಚಿಕ್ಕವನಿರುವಾಗೇ ಸಿಡುಬು ರೋಗಕ್ಕೆ ತುತ್ತಾಗಿ ದುರ್ಬಲವಾದ, ಕಣ್ಣಿನ ದೃಷ್ಟಿ ಕಡಿಮೆಯಾಗಿದ್ದರೂ, ಶಾರೀರಿಕ ದೌರ್ಬಲ್ಯದಿಂದ ನರಳುತ್ತಿದ್ದರೂ ಶಾಲೆಯಲ್ಲಿ ಪ್ರತಿಭಾವಂತ ವಿದ್ಯಾರ್ತಿಯಾಗಿದ್ದ. ಅಸಾಧಾರಣ ಪ್ರತಿಭೆಯನ್ನು ಹೊಂದಿದ್ದ ಕೆಪ್ಲರ್ ವಿದ್ಯಾರ್ಥಿ ವೇತನದ ನೆರವಿನಿಂದ ತನ್ನ ಓದು ಮುಂದುವರಿಸಿದ. ಕೆಪ್ಲರ್ ತನ್ನ 13ನೇ ವಯಸ್ಸಿನಲ್ಲಿಯೇ ಆಗಿನ ಪ್ರತಿಷ್ಠಿತ 'ಗ್ರಾಜ್' ವಿಶ್ವವಿದ್ಯಾನಿಲಯದಲ್ಲಿ ನಕ್ಷತ್ರ ಶಾಸ್ತ್ರದ ಅಧ್ಯಾಪಕನಾಗುವ ಅವಕಾಶ ಪಡೆದುಕೊಂಡ. ಹಿರಿಯ ವಿಜ್ಞಾನಿ ಕೋಪರ್ನಿಕಸ್‌ನ ಸಿದ್ಧಾಂತವನ್ನು ಅಧ್ಯಯನ ಮಾಡಿದ್ದ ಕೆಪ್ಲರ್, ಸೂರ್ಯನೇ ವಿಶ್ವದ ಕೇಂದ್ರ ಎಂದು ಪ್ರತಿಪಾಧಿಸಿದ್ದಲ್ಲದೆ ಭೂಮಿ ಮತ್ತು ಚಂದ್ರರು ಸೂರ್ಯರ್ನ ಸುತ್ತಲೂ ಸುತ್ತುತ್ತಿವೆ ಎಂಬ ಸಿದ್ಧಾಂತವನ್ನು ಕ್ರಿ.ಶ. 1618ರಲ್ಲಿ ಪ್ರಕಟಿಸಿದ, ಅದಕ್ಕೆ ತಕ್ಕ ಆಧಾರಗಳನ್ನೂ ಒದಗಿಸಿ. ಆಗಿನ್ನೂ ಭೂಮಿಯೇ ವಿಶ್ವದ ಕೇಂದ್ರವೆಂದು ಧಾರ್ಮಿಕ ಸಂಸ್ಥೆಗಳು ಜನರನ್ನು ನಂಬಿಸಿದ್ದ ಕಾಲವಾಗಿತ್ತು. ಕೆಪ್ಲರನ ಪ್ರಕಟಣೆಯಿಂದ ಧಾರ್ಮಿಕ ಮುಖಂಡರು ಕುಪಿತಗೊಂಡರು. ಕೆಪ್ಲರ್ ಮತಧರ್ಮ ವಿರೋಧಿಯೆಂದು, ಇಲ್ಲದ್ದನ್ನು ಜನರ ತಲೆಗೆ ತುಂಬಿ ಸಾಮಾಜಿಕ ಅಶಾಂತಿಗೆ ಕಾರಣವಾಗಿದ್ದಾನೆಂದು ದೂರಲಾಯಿತು. ಇದಾವುದಕ್ಕೂ ತಲೆಕೆಡಿಸಿಕೊಳ್ಳದ ಕೆಪ್ಲರ್ ನಿಗೂಢ ವಿಶ್ವದ ಕುರಿತ ತನ್ನ ಸಂಶೋಧನೆಯನ್ನು ಮುಂದುವರೆಸಿದ.

ಕೋಪರ್‌ನಿಕಸ್‌ನ ಶೋಧನೆಯ ಜಾಡು ಹಿಡಿದ ಕೆಪ್ಲರ್, ಸೂರ್ಯನ ಸುತ್ತಲೂ ಗ್ರಹಗಳು ಹೇಗೆ ಚಲಿಸುತ್ತಿವೆ. ಅವುಗಳ ವೇಗಬೇಷ್ಟು ಎಂಬುದನ್ನು ಕಂಡುಹಿಡಿದ! ಇದನ್ನು ವಿವರಿಸಲು ತನ್ನದೇ ಆದ ನಿಯಮಗಳನ್ನು ನಿರೂಪಿಸಿದ. ಇವು 'ಕೆಪ್ಲರ್ ನಿಯಮಗಳು' ಎಂದು ಪ್ರಖ್ಯಾತ ಪಡೆದವು.

ಮುಂದೆ ವಿಜ್ಞಾನಿ ಐಸಾಕ್ ನ್ಯೂಟನ್‌ಗೆ 'ಗುರುತ್ವಾಕರ್ಷಣೆ ನಿಯಮ'ಗಳನ್ನು ಮಂಡಿಸಲು ಕೆಪ್ಲರ್ ನಿಯಮಗಳೇ ಅಡಿಪಾಯವಾದವು! ಇಂದು ಪ್ರಸ್ತುತ ಆಧುನಿಕ ಯುಗದಲ್ಲಿ ನ್ಯೂಟನ್ನರ ಈ ನಿಯಮಗಳೇ ಮನುಷ್ಯ ವಿಶ್ವದ ಗ್ರಹೋಪಗ್ರಹಗಳಿಗೆ ತೂರಿಬಿಟ್ಟ 'ಕೃತಕ ಉಪಗ್ರಹ'ಗಳ ಚಲಿಸುವ ಪಥಗಳನ್ನು ನಿರ್ಧರಿಸುತ್ತಿವೆ! ಕೆಪ್ಲರ್ ಜೋಡಿಸಿದ ಜ್ಞಾನದ ಇಟ್ಟಿಗೆಗಳಿಗೆ ನ್ಯೂಟನ್ ತನ್ನ ಜ್ಞಾನದಿಂದ ನಯವಾದ, ಭದ್ರವಾದ ಗಾರೆಹಾಕಿ ಕಟ್ಟಡ ಪೂರ್ಣಗೊಳಿಸಿದ. ಆ ಜ್ಞಾನದ ಫಲವನ್ನು ಇಡೀ ಮನುಕುಲೇ ಇಂದು ಸವಿಯುತ್ತಿದೆ. ಈ ಖಗೋಳ ವಿಜ್ಞಾನಿಗಳ ಶ್ರಮವಿಲ್ಲದಿದ್ದರೆ, ಇಂದಿನ ನಮ್ಮ ಕೃತಕ ಉಪಗ್ರಹಗಳು ಇರುತ್ತಿರಲಿಲ್ಲ. ಇವುಗಳಿಂದಲೇ ನಡೆಯುವ ನಮ್ಮ ಮೊಬೈಲ್ ಪೋನುಗಳಾಗಲಿ, ಕಂಪ್ಯೂಟರುಗಳಾಗಲೀ, ಇಂಟರ್‌ನೆಟ್ ಆಗಲೀ ಇರುತ್ತಿರಲಿಲ್ಲ. ಗೋಡೆಗೆ ಇಟ್ಟಿಗೆ ಹೇಗೆ ಭದ್ರತೆ ಒದಗಿಸುತ್ತದೆಯೋ ಹಾಗೆ ಜ್ಞಾನದ ಧಾರೆಗೆ ನೂರೆಂಟು ಆಸರೆಗಳು. ಯಾವುದು ಮುಖ್ಯ ಯಾವುದು ಅಮುಖ್ಯ ಎಂಬುದಿಲ್ಲ, ಎಲ್ಲವೂ ಅವುಗಳ ಪ್ರಾಮುಖ್ಯತೆಯನ್ನು ಹೊಂದೇ ಇರುತ್ತದೆ.

# ಭೂಮಿಯ ತಾಪಮಾನ ಏರಿಕೆ ಪರಿಣಾಮ?

ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿ

ಮಹಾಪೂರದಿಂದ ಎಲ್ಲೆಲ್ಲೂ ಹಾಹಾಕಾರ ಕಾಣುತ್ತಿದ್ದೇವೆ. ಕೆಲವರು ನಾವೇನು ತಪ್ಪು ಮಾಡಿದ್ದೆವೆಂದು ನಮಗೀ ಶಿಕ್ಷೆ? ಎಂದರೆ ಇನ್ನೂ ಕೆಲವರು ದೇವರಿಗೆ ಹಿಡಿ ಶಾಪ ಹಾಕುತ್ತಿದ್ದಾರೆ. ಜನರ ಈ ಪ್ರತಿಕ್ರಿಯೆ ಎಷ್ಟು ಅವೈಜ್ಞಾನಿಕವೆಂದು ನಾವು ವೈಜ್ಞಾನಿಕವಾಗಿ ಯೋಚಿಸಿದಾಗ ಅರ್ಥವಾಗುತ್ತದೆ. ಮಹಾಪೂರ ಬರಲು ಕಾರಣ ವಿಪರೀತ ಮಳೆ ಸುರಿದದ್ದು. ಹಾಗಾದರೆ ಅತಿವೃಷ್ಟಿಗೆ ವೈಜ್ಞಾನಿಕ ಕಾರಣವೇನು? ಎಲ್ಲರು ಯೋಜಿಸಬೇಕಾದ ವಿಚಾರ. ಭೂಮಂಡಲದ ಮೇಲೆ ಸುಮಾರು 71% ಭಾಗ ನೀರು ತುಂಬಿದೆ. ಅದರಲ್ಲಿ ಸಮುದ್ರ ಮಹಾಸಾಗರಗಳೇ 97% ಭಾಗ ಭೂಮಿಯನ್ನು ಆವರಿಸಿವೆ. ನೀರು ಸದಾ ಚಲನಶೀಲ ಎಂದೂ ಒಂದೇ ರೀತಿ ಇರುವುದಿಲ್ಲ. ಶೀತ ಹೆಚ್ಚಿದ್ದಲ್ಲಿ ಹಿಮವಾಗಿದ್ದರೆ, ನದಿ ಹಳ್ಳ ಕೊಳ್ಳಗಳಲ್ಲಿ ಹರಿಯುವ ನೀರು ಸಮುದ್ರ ಸೇರುತ್ತದೆ. ಭೂಮಂಡಲದ ಮೇಲಿರುವ ನೀರು ಎಲ್ಲೆಲ್ಲಿದೆ, ಹೇಗಿದೆ ಎಂದು ವಿವರಿಸಬೇಕೆಂದರೆ, 97% ಮಹಾಸಾಗರದಲ್ಲಿದ್ದರೆ 2% ಹಿಮವಾಗಿದೆ (glaciers) 0.62% ನೀರು ಭೂಮಿಯ ಕೆಳಗೆ ಅಂತರ್ಜಲವಾಗಿದೆ (Under Ground Water), 0.009% ಕೆರೆಗಳಲ್ಲಿದ್ದರೆ, 0.008% ಉಪ್ಪುನೀರಿನ ಕೊಳಗಳಲ್ಲಿದೆ, 0.001% ಹವೆಯಲ್ಲಿದ್ದು, ಕೇವಲ 0.0001% ಮಾತ್ರ ನದಿಯಲ್ಲಿ ಹರಿಯುತ್ತದೆ. ಹಾಗಾಗಿ ಹಿಂದಿನ ಕಾಲದಲ್ಲಿ ಎಲ್ಲಾ ಸಂಸ್ಕೃತಿಗಳು ನದಿಗಳ ಪಕ್ಕದಲ್ಲೇ ಬೆಳೆಯುತ್ತಿದ್ದವು. ಈಗಲೂ ಕೂಡ ರೈತರು ತಮ್ಮ ಬೆಳೆಗಾಗಿ, ಮಳೆನೀರು, ಇಲ್ಲ ನದಿ ನೀರು, ಇಲ್ಲವೆ Bore Well ನಿಂದ ಅಂತರ್ಜಲದ ಮೇಲೆ ಅವಲಂಬಿಸಿದ್ದಾರೆ. ಒಂದು ನದಿ ಹಲವು ರಾಜ್ಯದ ಮುಖಾಂತರ ಹರಿದಾಗ ನೀರಿಗಾಗಿ ಹಾಹಾಕಾರ, ಜಗಳ, ದೂರುವುದು, ಸರ್ವೇಸಾಮಾನ್ಯ. ಭೂಮಿಯ ಮೇಲೆ ಕೇವಲ 2.5% ನೀರು ಮಾತ್ರ ಸಿಹಿನೀರು ಇದ್ದು ಇದರಲ್ಲಿ 69% ಹಿಮವಾಗಿ ಇರುವುದರಿಂದ ಮನುಷ್ಯರ ಬಳಕೆಗೆ ಬರುವ ನೀರಿನ ಪ್ರಮಾಣ ಅತ್ಯಂತ ಕಡಿಮೆ ಇರುವುದರಿಂದ ಎಲ್ಲೆಲ್ಲೂ ನೀರಿನ ಅಭಾವ ಕಾಣುತ್ತಿದ್ದೇವೆ. ಆದ್ದರಿಂದ ಕುಡಿಯುವ ನೀರಿಗಾಗಿ ಅಕ್ಕಪಕ್ಕದ ಮನೆಯವರ ಜಗಳ ಹಿಡಿದು, ರಾಜ್ಯಗಳ ಮಧ್ಯೆ ರಾಷ್ಟ್ರಗಳ ಮಧ್ಯೆ ಕಲಹ ಜಗತ್ತಿನಾದ್ಯಂತ ನಡೆಯುತ್ತಿವೆ. ನೀರಿಗಾಗಿ ಯುದ್ಧವಾಗುವ ಸಮಯ ದೂರವಿಲ್ಲ. ಕಾರಣ ಹರಿಯುವ ನೀರಿಗೆ ಗಡಿ, ಸೀಮೆ ಇಲ್ಲ ! ನದಿಗಳು ಬೆಟ್ಟದಲ್ಲಿ ಉಗಮಿಸಿ ಸಮುದ್ರ ಸೇರುವ ವರೆಗೂ ಸೀಮಾತೀತವಾಗಿ ಹರಿಯುತ್ತವೆ. ನೈಲ್ ನದಿ 7 ರಾಷ್ಟ್ರಗಳಲ್ಲಿ ಹರಿಯುತ್ತದೆ. ಪವಿತ್ರ ಗಂಗೆ ಕೂಡ 5 ರಾಜ್ಯಗಳಲ್ಲಿ ಹರಿಯುತ್ತದೆ. ಈ ನದಿಗಳಲ್ಲಿ ಸಿಹಿ ನೀರು ಹರಿಯಬೇಕೆಂದರೆ ನದಿ ಪಾತ್ರಗಳಲ್ಲಿ ಚೆನ್ನಾಗಿ ಮಳೆಯಾಗಬೇಕು. ಮಳೆಯಾಗಲು ನೀರು ಹೊತ್ತ ಕಪ್ಪು ಮೋಡಗಳು ಬರಬೇಕು. ಈ ಮೋಡಗಳು ಉತ್ಪತ್ತಿ ಆಗುವುದೇ ಸಮುದ್ರದ ನೀರು ಆವಿ ಆಗಿ ಹವೆಯಲ್ಲಿ ಸೇರಿಕೊಂಡಾಗ ಅದು ನೀರಿನ ಹನಿಗಳಾಗಿ ಮೋಡಗಳಲ್ಲಿ ಸೇರಿಕೊಂಡು ಸಮುದ್ರದ ಮೇಲಿಂದ ಗಾಳಿ ಭೂಮಿ ಕಡೆಗೆ ಚಲಿಸಿದಾಗ ಮೋಡಗಳೂ ಕೂಡ ಭೂಮಿಯ ಕಡೆಗೆ ಚಲಿಸುತ್ತವೆ. ಮಾಡಲು ಸಮುದ್ರದ ದಡವಾದ ಕರಾವಳಿಗೆ ತಲುಪಿ ಅಲ್ಲಿ ಮಳೆ ಸುರಿಸುತ್ತವೆ. ನಮ್ಮ ದೇಶದ ಪಶ್ಚಿಮ ಘಟ್ಟಗಳು ಅರಬ್ಬಿ ಸಮುದ್ರದ ಮೇಲಿಂದ ಬಂದ ಮೋಡಗಳನ್ನುತಡೆದು ಸಹ್ಯಾದ್ರಿ ಪರ್ವತ ಶ್ರೇಣಿಗಳ ಮೇಲೆ ಮಲಪ್ರಭಾ, ದೂಧ ಗಂಗಾ, ವೇದ ಗಂಗಾ, ಶರಾವತಿ, ನೇತ್ರಾವತಿ, ತುಂಗಾ, ಇವು ಎಲ್ಲಾ ಮೈತುಂಬಿ ಹರಿಯಲು ಕಾರಣ ಧಾರಾಕಾರವಾಗಿ ಸುರಿದ ಮಳೆ, ಆರು ತಿಂಗಳಿಗೆ ಆಗಬೇಕಾದ ಮಳೆ ಆರೇ ದಿನದಲ್ಲಿ ಆಗಿತ್ತು. ಅದರ ಮೇಲೆ ಮಹಾರಾಷ್ಟ್ರದಲ್ಲಿ ಮಹಾಮಳೆಯಿಂದ ಆದ ನೆರೆ ಹಾವಳಿಯಿಂದ ಅವರು ತಮ್ಮ ಡ್ಯಾಂಮ್‌ನಿಂದ ನೀರು ಬಿಡಬೇಕಾಯಿತು. ಹಾಗಾಗಿ ಉತ್ತರ ಕರ್ನಾಕದ ಜನ ನೆರೆ ಹಾವಳಿಯಿಂದ ಮನೆ ಮಠ ಕಳೆದುಕೊಂಡು ತತ್ತರಿಸಬೇಕಾಯಿತು. ಈ ಮಹಾ ಮಳೆ ಭೂಮಿಯ ತಾಪಮಾನ ಹೆಚ್ಚುತ್ತಿರುವ ಮುನ್ಸೂಚನೆ ಆಗಿದೆ.





# ಸ್ಕೌಟ್ಸ್ ಮತ್ತು ಗೈಡ್ಸ್ ರಸಪ್ರಶ್ನೆ - 06

– ಎಂ.ಎನ್ ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

1. ರೀಫ್ ನಾಟ್‌ಗೆ ಇನ್ನೊಂದು ಹೆಸರೇನು ?
2. ಬಿ.ಪಿ. ಯವರ ತಂದೆಯ ಪೂರ್ಣ ಹೆಸರೇನು ?
3. ಭಾರತ್ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ರಾಷ್ಟ್ರೀಯ ಮುಖ್ಯ ಆಯುಕ್ತರು ಯಾರು ?
4. ಒಂದು 6 ಇಂದು ಅಗಲ 6 ಇಂಚು ಉದ್ದ ಮತ್ತು 6 ಇಂಚು ಆಳವಿರುವ ಗುಂಡಿಯಲ್ಲಿ ಎಷ್ಟು ಮಣ್ಣಿದೆ ?
5. ವಿಶ್ವ ಯಾವ ದೇಶದಲ್ಲಿ ಅತೀ ಹೆಚ್ಚಿನ ಬಾಯ್ ಸ್ಕೌಟ್ಸ್‌ಗಳಿದ್ದಾರೆ ?
6. ದಕ್ಷಿಣ ಆಫ್ರಿಕಾದಲ್ಲಿ ಅಸಾಂತಿ ಬುಡಕಟ್ಟು ಜನಾಂಗದ ದಂಗೆಯನ್ನು ನಿಷ್ಕ್ರಿಯಗೊಳಿಸಿದ ಮೇಲೆ ಈ ಕುರಿತು ಬಿ.ಪಿ. ಯವರು ಬರೆದ ಪುಸ್ತಕ ಯಾವುದು ?
7. ಬಿ.ಪಿ.ಯವರು ಭಾರತದಲ್ಲಿ ತಮ್ಮ ಸೇನಾ ಸೇವೆಯ ಅವಧಿಯಲ್ಲಿ ಯಾವ ರೆಜಿಮೆಂಟಿನಲ್ಲಿ ಕೆಲಸ ಮಾಡಿದರು?
8. ಪೆಟ್ಟಾದಾಗ ಮೂಳೆ ಮುರಿದಿದೆ ಎಂಬುದಕ್ಕೆ ಮುಖ್ಯವಾದ ಎರಡು ಕುರುಹುಗಳಾವುವು ?
9. ಟೋಪೊಗ್ರಾಫಿಕಲ್ ಮ್ಯಾಪ್‌ನಲ್ಲಿ ಈ ಸಂಕೇತ ಏನನ್ನು ಸೂಚಿಸುತ್ತದೆ ?
10. ಮೊದಲನೆ ಸ್ಕೌಟ್ ಮಾಸ್ಟರ್‌ಗಳ ತರಬೇತಿಯಲ್ಲಿ ಬೆಳಗ್ಗೆ ಶಿಭಿರಾರ್ತಿಗಳನ್ನು ಎಚ್ಚರಿಸಲು ಉಪಯೋಗಿಸಿದ ಆಫ್ರಿಕದ ಕಹಳೆಯ ಹೆಸರೇನು ?

**ಸ್ಕೌಟ್ ಮತ್ತು ಗೈಡ್ಸ್ ರಸಪ್ರಶ್ನೆ – 05 ಉತ್ತರಗಳು**

1. World Association of Scout Movement
2. ಅಗಲ 6 ಇಂಚು, ಆಳ 9 ಇಂಚು, ಉದ್ದ 18 ಇಂಚು
3. ಮೂಗಿನಿಂದ ಉಸಿರಾಡುವುದರಿಂದ
4. ಲಾರ್ಡ್ ಎಡ್ವರ್ಡ್ ಸಿಸಿಲ್
5. ಲೈಫ್ ಲೈನ್
6. 9 ನೇ ವಿಧಿ
7. ವೂಲ್ಫ್, ಕರ್‌ಲ್ಯೂಸ್, ಬುಲ್ಸ್, ರೇವನ್ಸ್
8. ಕನ್‌ವೆನ್‌ಶನಲ್ ಸೈನ್ಸ್
9. ಆಲೀವ್ ಸೋಮ್ಸ್
10. ಪ್ರಾಣಿಗಳ ಸ್ನೇಹಿತ

# ಸ್ಕೌಟಿನ ಪಾಠ

– ದೇವೇಂದ್ರ ಕಟ್ಟಿಮನಿ
ಸ್ಕೌಟ್ ಮಾಸ್ಟರ್
ಸರ್ಕಾರಿ ಪ್ರಾಥಮಿಕ ಶಾಲೆ, ಇಡಪನರು ತಾ:ಜಿ: ರಾಯಚೂರು

ಪುಟ್ಟ ಹೆಜ್ಜೆಯ ಧಿಟ್ಟ ಮಗುವೆ ಎಲ್ಲಿಗೆ ಹೊರಟಿರುವೆ
ಪರಿಸರದೊಡನೆ ಪಾಠವಕಲಿಯಲು ಎಂದು ನೀ ಬರುವೆ ॥ಪ॥

ನಮ್ಮ ಶಾಲೆಯ ಎಲ್ಲ ಮಕ್ಕಳು ಸ್ಕೌಟ್‌ಗೈಡಿಗೆ ಸೇರಿರಲು
ನಿಮ್ಮ ಗೆಳೆಯರ ಶಿಸ್ತನು ಕಂಡು ಸುಮ್ಮನೆ ಏಕೆ ಕುಳಿತಿರುವೆ ॥೧॥

ಪ್ರೀತಿ, ಸ್ನೇಹ ಬೆಳೆಸುವ ತಾರೆ ನೀವು ನಿಮ್ಮ ಊರಿಗೆ
ಪುಟ್ಟ ವಚನ ದಟ್ಟವಮಾಡಿ ಸೇವೆಗೆ ನೀನು ನಿಂತಿರುವೆ ॥೨॥

ತುಂಟರ ಆಟದ ಗಂಟಿನ ನಂಟು ನಿನಗೂ ಇನ್ನು ಬೇಡವೆ !
ತುತ್ತತುದಿಯ ಬೆಟ್ಟವ ಹತ್ತಲು ಹೈಕಿಗೆ ನಿನ್ನ ಕರೆತರುವೆ ॥೩॥

ಕಾಡು ಸುತ್ತುವ ಗೂಡಾಚಾರ ನಿನಗೆ ನಾನು ಕಲಿಸುವೆ
ಕೈಯಲಿ ಕಂಪಾಸ್ ಹಿಡಿದು ನೀನು ದಿಕ್ಕು ಶೋಧ ಮಾಡುವೆ ॥೪॥

ನಸುಕಿನ ಜಾವದ ಪ್ರಾಣಿಯ ಕೂಗು ಕೇಳಿ ನೀನೇ ಕಲಿಯುವೆ
ನಕ್ಕು ನಲಿಯುತ ಹಕ್ಕಿಯ ಧ್ವನಿಯಲಿ ನನ್ನ ಕೂಗಿ ನೀ ಕರೆವೆ ॥೫॥

ಹಿರಿಯರೆ ಇರಲಿ ಕಿರಿಯರೆ ಇರಲಿ ಮೊದಲು ನೀನು ಗೌರವಿಸು
ಹೆಮ್ಮೆಯ ಹಿರಿಮೆ ದೇಶದ ಗರಿಮೆ ನಿನ್ನಲಿ ಒಮ್ಮೆ ನೀ ಬರಿಸು ॥೬॥

# 24ನೇ ವಿಶ್ವ ಸ್ಕೌಟ್ ಜಾಂಬೂರಿಯ ಒಂದು ಸಂಕ್ಷಿಪ್ತ ವರದಿ ಮತ್ತು ಅನಿಸಿಕೆ




24ನೇ ವಿಶ್ವ ಸ್ಕೌಟ್ ಜಾಂಬೂರಿಯಲ್ಲಿ ದಳ ನಾಯಕಿಯಾಗಿ ಕರ್ನಾಟಕ ರಾಜ್ಯದ 22 ಸ್ಕೌಟ್ಸ್, 20 ಗೈಡ್ಸ್ ಮಕ್ಕಳೊಂದಿಗೆ ಜುಲೈ 20 ರಿಂದ ಆಗಸ್ಟ್ 10ರ ವರೆಗೆ ರಾಜ್ಯ ಮುಖ್ಯ ಆಯುಕ್ತರು ಹಾಗೂ ರಾಜ್ಯ ಪದಾಧಿಕಾರಿಗಳ ಪ್ರೋತ್ಸಾಹ ಮತ್ತು ಮಾರ್ಗದರ್ಶನದಲ್ಲಿ ಸಮಿತ್, ಬೆಚೆಲ್ ರಿಸರ್ವ, ವೆಸ್ಟ್ ವರ್ಜೀನಿಯಾ, ಉತ್ತರ ಅಮೇರಿಕಾ ಇಲ್ಲಿ ಭಾಗವಹಿಸಿದ ಅನುಭವ ಒಂದು ಅಮೋಘವಾದದ್ದು.12,000 ಎಕರೆ ಉತ್ತಮವಾದ ಹಸಿರಿನಿಂದ ಕಂಗೊಳಿಸುವ ರಮ್ಯ ಮನೋಹರ ತಾಣದಲ್ಲಿ 45,000 ಮಕ್ಕಳು, ದಳನಾಯಕರು, ಐ.ಎಸ್.ಟಿ (International Service Team) ಎಲ್ಲರೂ 150 ದೇಶಗಳಿಂದ ಭಾಗವಹಿಸಿದ್ದು. "ವಿವಿಧತೆಯಲ್ಲಿ ಏಕತೆ" ಎನ್ನುವ ಸಂದೇಶವನ್ನು ಸಾರಿದ ಜಾಂಬೂರಿ ಅತ್ಯುತ್ತಮ.ವಿವಿಧ ಭಾಷೆ, ಉಡುಗೆ- ತೊಡುಗೆ, ಆಹಾರ, ನಡೆನುಡಿ, ನಾಡು ಆಚಾರ ವಿಚಾರ ಇವುಗಳಲ್ಲೆವನ್ನು ವೀರಿ ಅಲ್ಲಿ ಕಂಡು ಬಂದಿದ್ದು. ಪ್ರತಿಜ್ಞೆನಿಯಮವಿರುವ ಸ್ಕೌಟ್ಸ್, ಗೈಡ್ಸ್ ವಯಸ್ಕರರು, ಸ್ಕಾರ್ಫ್ ಧರಿಸಿ "ನಾವೆಲ್ಲರು ಒಂದೇ" ಎನ್ನುತ್ತಿತ್ತು ಜಾಂಬೂರಿ.

ಜಾಂಬೂರಿ ವೈಶಿಷ್ಠತೆ:- ವಿಶ್ವ ಸ್ಕೌಟ್ ಜಾಂಬೂರಿಯ ವಿಶ್ವದ ಯುವ ಜನತೆಯನ್ನು ಶಾಂತಿ, ಸ್ನೇಹ, ನಾಯಕತ್ವ, ಕೌಶಲ್ಯಾಭಿವೃದ್ಧಿ ಸಹಜೀವನದೊಂದಿಗೆ ವಿಶೇಷವಾಗಿ ಅರ್ಥಮಾಡಿಕೊಳ್ಳುವ ಒಂದು ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣವನ್ನು ನೀಡುವ ಬೃಹತ್ ಮೇಳ ಎಂದರೆ ತಪ್ಪಾಗಲಾರದು.

24ನೇ ವಿಶ್ವ ಸ್ಕೌಟ್ ಜಾಂಬೂರಿಯು ಹಿಂದಿನ ಎಲ್ಲಾ ಜಾಂಬೂರಿಗಳಿಗಿಂತ ಭಿನ್ನವಾಗಿ ಚಿಂತನೆ ನಡೆಸಿ, ವಿಶೇಷವಾಗಿ "ಗ್ಲೋಬಲ್ ಡೆವಲಪ್‌ಮೆಂಟ್ ವಿಲೇಜ್, ವಿಶ್ವ ಸ್ಕೌಟ್ ಕೇಂದ್ರ, ಸಾಮಾಜಿಕ ಅಭಿವೃದ್ಧಿ ಮತ್ತು ಮಾರಕಗಳು, ಸಾಹಸ ಚಟುವಟಿಕೆಗಳು, ಭೂಮಿ, ಆಕಾಶ, ನೀರು ಎಲ್ಲಾ ಕಡೆ ವಿಸ್ಮಯ ಚಟುವಟಿಕೆಗಳು ಜ್ಞಾನದ ಭಂಡಾರವನ್ನು ಹೊತ್ತು ವಿವಿಧ ಚಟುವಟಿಕೆಗಳ ಮೂಲಕ ಸ್ನೇಹದ ಸೇತುವೆಯಿಂದ 150 ದೇಶಗಳ ಸಾಮಾನ್ಯ ಜ್ಞಾನವು ವಿಶ್ವದಾದ್ಯಂತ ಯುವಕರು ತಲೆ ಎತ್ತಿ ಉತ್ತಮ ಉಜ್ವಲ ಭವಿಷ್ಯಕ್ಕಾಗಿ ವಿಸ್ಮಯ ಜಗತ್ತನ್ನು ಅಂದರೆ "ಹೊಸ ಪ್ರಪಂಚವನ್ನು ನೋಡುವ ಸದಾವಕಾಶ". Unlock a new world.

ಪ್ರತಿಯೊಂದು ದೇಶಕ್ಕೆ ಯುವ ಜನತೆ ಅತೀ ಅವಶ್ಯ ಅವರ ಚಿಂತನೆಗೆ ಸಂಶೋಧನೆಗೆ ಪ್ರೋತ್ಸಾಹ ಹಾಗೂ ಸ್ವಾವಲಂಬಿಯಾಗಿ ಬದುಕಲು ಒಂದು ಉತ್ತಮ ದಾರಿ ಅವಶ್ಯವಿರುವ ಅಂಶಗಳನ್ನು ಒಂದೇ ಬೃಹತ್ ವೇದಿಕೆಯಾದ ಜಾಂಬೂರಿಯಲ್ಲಿ 10 ದಿನಗಳು ಉತ್ತಮ ಕಲೆಯೊಂದಿಗೆ ನಲಿಯುತ್ತಾ ಕಲಿತು ಖುಷಿ ಖುಷಿಯಾಗಿ ಒಬ್ಬರು ಇನ್ನೊಬ್ಬರೊಂದಿಗೆ ಹಂಚಿಕೊಂಡ ನಿಸರ್ಗದ ಮಡಿಲು Reserve ನಲ್ಲಿ ವಿಶ್ವದ ಕಲೆಗಳನ್ನು ಪ್ರದರ್ಶಿಸಿದ ಮಹಾ ರಂಗ ಮಂಟಪ ಜಾಂಬೂರಿ.ಅಮೇರಿಕಾ, ಕೆನಡಾ ಮತ್ತು ಮೆಕ್ಸಿಕೋ ಮೂರು ದೇಶಗಳು ಸೇರಿ ಒಂದು ಉತ್ತಮ ನಿಯಮ ಪ್ರತಿಜ್ಞೆ ಮೂಲಕ ಗೌರವಯುತವಾಗಿ ಸಹಿಷ್ಣತೆ, ಪರಿಸರ ರಕ್ಷಣೆ ಉತ್ತಮ ನಡತೆ, ಸ್ವಚ್ಛತೆ, ಸಮಯ ಪ್ರಜ್ಞೆ, ಜಾಂಬೂರಿ ಐ.ಡಿ.ಕಾರ್ಡ್, ಸ್ಕಾರ್ಫ್ ಮೂಲಕ ಸ್ಕೌಟಿಂಗ್ ಮೂಲಭೂತ ತತ್ವಗಳನ್ನು ಬೇಡನ್ ಪಾವೇಲ್‌ರ ಹೇಳಿಕೆಗಳನ್ನು ಎತ್ತಿ ಹಿಡಿಯುವುದರ ಮೂಲಕ ಮಕ್ಕಳಿಗೆ ಜಾಂಬೂರಿಯು ಯಾವುದೇ ಭೇದಭಾವಗಳಿಗೆ ಅವಕಾಶವಿಲ್ಲದ ಉತ್ತಮ ಮೇಳವಾಗಿತ್ತು.

ಜುಲೈ 21ರಂದು ಮಧ್ಯರಾತ್ರಿ Base No.B ಗೆ ನಾವು ಮತ್ತು ಮಕ್ಕಳು ಹೆಣ್ಣು ಮಕ್ಕಳು ಕೊರೆಯುವ ಚಳಿಯಲ್ಲಿ ಆದರೂ ಮಲಗಲು Cot ಸೆಟ್ ಮಾಡಿಕೊಂಡು ರಾತ್ರಿ 02 ಗಂಟೆಗೆ ಮಲಗಿ ಬೆಳಿಗ್ಗೆ 06 ಗಂಟೆಗೆ ಎದ್ದು ಅಲ್ಲೇ ಉಪಹಾರವನ್ನು ದೂರ ಬಂದು ನಂತರ ನಮ್ಮ ಸ್ಕೌಟ್‌ಗಳ ಸಹಾಕಾರದಿಂದ ಒಟ್ಟು 24 ಟೆಂಟ್‌ಗಳನ್ನು ಸಿದ್ದಪಡಿಸಿಕೊಂಡು ನಮ್ಮ ದಿನಚರಿ ಪ್ರಾರಂಭಿಸಿದೆವು.

ನಮ್ಮ ಸ್ಕೌಟ್ ಗೈಡ್‌ಗಳನ್ನು ಪೆಟ್ರೋಲ್‌ಗಳನ್ನಾಗಿ ವಿಂಗಡಿಸಿ 04 ತಂಡಗಳನ್ನಾಗಿ ಮಾಡಿ

1. ಚಟುವಟಿಕೆ 2. ಊಟೋಪಚಾರ 3. ಸ್ವಚ್ಚತೆ 4. ಬಿ.ಪಿ.ವ್ಯಾಯಾಮ 5. ಧ್ವಜಾರೋಹಣ

ಹೀಗೆ ಕೆಲಸ ಹಂಚಿ ಅವರುಗಳಿಗೆ ಶಿಬಿರದ ಯಶಸ್ಸಿಗೆ ಸಂಪೂರ್ಣ ಸಹಕಾರಕ್ಕಾಗಿ ಮಾರ್ಗದರ್ಶನವನ್ನು ನೀಡಲಾಯಿತು. ಹಗಲಲ್ಲಿ ಸೂರ್ಯ ಪ್ರಖರವಾಗಿ ತನ್ನ ಕಿರಣಗಳನ್ನು ಎಲ್ಲೆಡೆ ಪಸರಿಸಿ ಬಿಸಿಲ ಬೇಗೆಯನ್ನು ಉಂಟುಮಾಡಿದರೆ ರಾತ್ರಿ 09.30 ರ ವರೆಗೂ ಮುಳಗದಿರುವ ಸೂರ್ಯನ ವಿಸ್ಮಯವನ್ನು ನೋಡಿದರೆ ಬೆಳಗ್ಗೆ ಹೊಗೆಯ ಹಂದರವನ್ನು ಪೋಣಿಸುವುದು ಚಳಿಯಲ್ಲೂ ಮುದ ನೀಡುವಂತಿತ್ತು.

ಬೆಳಿಗ್ಗೆ 05:30ಕ್ಕೆ ಸ್ಕೌಟ್-ಗೈಡ್‌ಗಳೊಂದಿಗೆ ಅಡುಗೆಗೆ ಬೇಕಾದ ಸಾಮಾನು ತಂದು ಎಲ್ಲರಿಗೂ ಹಂಚುವುದು ತುಂಬಾ ಚೆನ್ನಾಗಿತ್ತು. ಬೆಳಿಗ್ಗೆ 07:30ಕ್ಕೆ ಧ್ವಜಾರೋಹಣದ ನಂತರ ಮಕ್ಕಳು ಬ್ಯಾಗ್‌ನಲ್ಲಿ ಹಣ್ಣು, ಬಿಸ್ಕೆಟ್, ಬ್ರೆಡ್, ನೀರು ಮುಂತಾದವುಗಳನ್ನು ಹಾಕಿ ಸೈನಿಕರಂತೆ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳಲು ಸಿದ್ದರಾಗಿ ಸಾಗುತ್ತಿದ್ದರು, ಇದೇ ಮೊದಲ ಬಾರಿಗೆ ನೂರಾರು ಚಟುವಟಿಕೆಗಳನ್ನು ನಾನು ನೋಡಿದ್ದು ಅವುಗಳಲ್ಲಿ ಸಾಹಸಮಯ, ನೀರಿನಲ್ಲಿ ಚಟುವಟಿಕಗಳು ಗುಡ್ಡಗಾಡು ಪ್ರದೇಶದಲ್ಲಿ ಬೈಸಿಕಲ್, ರೈಡಿಂಗ್, ಗ್ಲೋಬಲ್ ಡೆವೆಲಪ್‌ಮೆಂಟ್ ವಿಲೇಜ್ ಲೀಡರ್‌ಶಿಪ್ ಅಭಿವೃದ್ಧಿ, ಹಗ್ಗದಲ್ಲಿ ಆಟಗಳು, ಬ್ರೌನ್‌ಸೀ ಐಲ್ಯಾಂಡ್ ಚಾಲೆಂಜ್ ಸ್ಕಿಲ್, ಮರದ

ಮನೆಯಲ್ಲಿ ಮಾಹಿತಿ, ಪಾಠ ಒಟ್ಟಾರೆ ಹೇಳುವುದಾದರೆ ದೈಹಿಕ, ಮಾನಸಿಕ, ಆದ್ಯಾತ್ಮಿಕ, ಸಾಮಾಜಿಕ, ಭಾವನಾತ್ಮಕ, ನೈಸರ್ಗಿಕ ಎಲ್ಲಾ ಅಂಶಗಳು ಅಭಿವೃದ್ಧಿ ಹೊಂದಲು ವಿಶ್ೇಷ, ವಿನೂತನ ಚಟುವಟಿಕೆಗಳಲ್ಲಿ ಮಕ್ಕಳು ಮನ ಸಂತೋಷಗೊಂಡಿದ್ದು ವಿಶೇಷವಾಗಿತ್ತು.

ಸಂಜೆ ಮಕ್ಕಳು ವಾಪಾಸ್ ಬೇಸ್ ಕ್ಯಾಂಪ್‌ಗೆ ಬಂದ ನಂತರ ಆ ದಿನ ಅವರು ಭಾಗವಹಿಸಿದ ಚಟುವಟಿಕೆ, ಅನುಭವ ಇವುಗಳನ್ನು ಕೇಳಿ, ನಾಳೆಯ ಅವರ ಕಾರ್ಯಕ್ರಮದ ಬಗ್ಗೆ ಚರ್ಚಿಸುತ್ತಿದ್ದೆವು. ಕಾರಣ ಕೆಲವು ಮಕ್ಕಳಿಗೆ ನಾಳೆಯ ಕಾರ್ಯಕ್ರಮದ ಬ್ಯಾಂಡ್ ಪಡೆದು ಬರುತ್ತಿದ್ದರು. ಸಂಜೆಯ ಸಭೆಯಲ್ಲಿ ಎಲ್ಲರ ಆರೋಗ್ಯ, ಚಟುವಟಿಕೆಗಳು, ಕುಂದುಕೊರತೆ, ಆಹಾರದ ಬಗ್ಗೆ ನಿರ್ಧರಿಸುತ್ತಿದ್ದೆವು.

ಜುಲೈ 23ರಂದು ನಡೆದ **W.S.J.** ಉದ್ಘಾಟನಾ ಸಮಾರಂಭಕ್ಕೆ ಸ್ಕೌಟ್–ಗೈಡ್‌ಗಳನ್ನು ಕರೆದುಕೊಂಡು ಹೋಗಿ ಭಾಗವಹಿಸಿದ್ದೆವು. ಇದೊಂದು ಸಮಾರಂಭ ಅಮೋಘವಾಗಿತ್ತು. ರಾಷ್ಟ್ರ ಸಂಸ್ಥೆ ನೀಡಿದ ಸಮವಸ್ತ್ರ ಧರಿಸಿ ಭಾರತ ಕಂಟಿಂಜೆಂಟ್ ಜೊತೆ ಭಾರತ ದೇಶಕ್ಕೆ ಮಾತೆಗೆ ಜಯಘೋಷಗಳ ಧ್ವನಿ ಮುಗಿಲು ಮುಟ್ಟುವಂತೆ ಮಕ್ಕಳು ದೇಶಭಕ್ತಿಯ ಪರಾಕಾಷ್ಟೆ ಮೊಳಗಿಸಿದರು.

ಮೆಕ್ಸಿಕೊ, ಕೆನಡ, ಅಮೇರಿಕಾ ದೇಶಗಳ ವೈಶಿಷ್ಟ್ಯದಂತೆ ಪ್ರಾರಂಭವಾಗಿ ಸರಳ ಸ್ವಾಗತ ಯಾವುದೇ ಹೂ ಗುಚ್ಛ ಅಥವಾ ಗಿಫ್ಟ್ ಇಲ್ಲದೆ ಸಂಕ್ಷಿಪ್ತ, ಯೋನಾ ಕರಡಿಯ ಸಂಭಾಷಣೆ, ನಿರೂಪಕರ ಉತ್ಸಾಹ, ಜಾಂಬೂರಿ ಗೀತೆ, ವೇಸ್ಟ್ ವಸ್ತುಗಳಿಂದ ತಯಾರಿಸಿದ ವಾದ್ಯಗಳಿಂದ ಅತ್ಯುತ್ತಮ ಸಂಗೀತ ಎಲ್ಲರ ಮನಸೂರೆಗೊಂಡಿತು. ಯುವಕ/ಯುವತಿಯರ ನೃತ್ಯ ಪ್ರದರ್ಶನದೊಂದಿಗೆ ಕುಣಿದು ಕುಪ್ಪಳಿಸಿ ವಿಶ್ವದ ಎಲ್ಲೆಡೆ ಸ್ಕೌಟ್ಸ್–ಗೈಡ್ಸ್ ನೇರ ವೀಕ್ಷಣೆಯಲ್ಲಿ ಉದ್ಘಾಟನಾ ಕಾರ್ಯಕ್ರಮ ಜಾಂಬೂರಿಯ ಎಲ್ಲಾ ಅಂಶಗಳನ್ನು ಡ್ರೋಣ್ ಕಣ್ಣಿನಿಂದ ಅದ್ಭುತವಾಗಿ ಸೆರೆಯಾಗಿದ್ದು ವಿಶೇಷವಾಗಿತ್ತು.

ಭಾರತ್ ಕೇಂದ್ರ ಕಛೇರಿಯಲ್ಲಿ ನಿತ್ಯ ನಮ್ಮ ಮಕ್ಕಳು ಇತರೆ ದೇಶದವರಿಗೆ ಮೆಹಂದಿ ಹಾಕುವುದು, ನಮ್ಮ ವಸ್ತು ಪ್ರದರ್ಶನದಲ್ಲಿ ಅಂಶಗಳನ್ನು ಇಟ್ಟಿರುವುದು ಸಭೆಯಲ್ಲಿ ಭಾಗವಹಿಸುವುದು. ರಾಷ್ಟ್ರ ಸಂಸ್ಥೆಯ ಮಾರ್ಗದರ್ಶನ ಉತ್ತಮವಾಗಿತ್ತು.

ಜಾಂಬೂರಿ **(World Scout Jamboree) WSJ** ಇಲ್ಲಿ **1. A- Alfa 2. B-Bravo 3. C-Charle**

**4. D-Delta 4** ಸಬ್ ಕ್ಯಾಂಪ್ ಬೇಸ್‌ಗಳಲ್ಲಿ ಉತ್ತಮ ಕಾಟ್ ಮತ್ತು ಟೆಂಟ್‌ಗಳು ಹುಲ್ಲಹಾಸಿಗೆ ಮೇಲೆ ನಮ್ಮ ನಿವಾಸಿ ತಾಣಗಳಿದ್ದವು ಅತ್ಯುತ್ತಮ ಪ್ರತ್ಯೇಕ ಶೌಚಾಲಯಗಳು, ಹೆಣ್ಣು ಗಂಡು ಮಕ್ಕಳಿಗೆ ಮತ್ತು ವಯಸ್ಕ ಪುರುಷ ಹಾಗೂ ಮಹಿಳೆಯರಿಗೆ ಉತ್ತಮ ಸ್ನಾನಗೃಹ ಕುಡಿಯುವ ನೀರಿನ ವ್ಯವಸ್ಥೆ ಎಲ್ಲಿ ಹೋದರೂ ಯಾವುದಕ್ಕೂ ತೊಂದರೆ ಇಲ್ಲ.

ಸ್ವಚ್ಛತೆ ಎನ್ನುವ ಪದಕ್ಕೆ ಅರ್ಥ ಕಂಡುಕೊಂಡದ್ದು ಇಲ್ಲೇ. ಕಾರಣ ಅಷ್ಟೊಂದು ಡಸ್ಟ್‌ಬಿನ್ ಇತರೆ ಎಲ್ಲಾ ಸೌಲಭ್ಯ ಇರುವುದರ ಜೊತೆಗೆ ಇತರರನ್ನು ನೋಡಿ ನಾವು ಪಾಲಿಸಿದ್ದು ಬಹಳ ಮುಖ್ಯವಾಯಿತು.

ಎಲ್ಲೆಲ್ಲೂ ಸಂಗೀತ **(Western Music)** ರಸದೌತಣ **150** ದೇಶಗಳ ವಿಶೇಷತೆಯೊಂದಿಗೆ ಕಛೇರಿಗಳು, ವಿವಿಧ ಚುಟುಕು ಆಟಗಳು ಬಹುಮಾನ, ಕೊಡುಗೆ ಇವು ಸ್ನೇಹ ಬಾಂದವ್ಯ ಬೆಸೆಯುವುದರ ಅವಕಾಶ ಜಾಂಬೂರಿಯಲ್ಲಿ ಎಲ್ಲೆಲ್ಲೂ ಸಿಗುತ್ತಿತ್ತು.

ಉತ್ತಮ ಸಂಪರ್ಕಕ್ಕಾಗಿ ಒಂದು ½ ಕಿಲೋಮಿಟರ್ ಉದ್ದದ ಅದ್ಭುತ ಹಾಗೂ ಸುಂದರ ಸೇತುವೆ A/B ಬೇಸಗಳಿಂದ ಸೆಂಟ್ರಲ್ ಅಥವಾ ಸಿ.ಡಿ ಬೇಸಗಳಿಂದ ಒಡಾಡಲು ಚಟುವಟಿಕೆಗಳಿಗೆ ಭಾಗವಹಿಸಲು ಒಂದು ಮುದ ನೀಡುವ ಸಂಪರ್ಕ ಸೇತುವೆ ಮಕ್ಕಳಿಗೆ ದೊಡ್ಡವರಿಗೆ ಬಹಳ ಇಷ್ಟ ವಾಗಿತ್ತು, ಕಾರಣ ಇದು ಇಲ್ಲದಿದ್ದರೆ 3 ಕಿಲೋಮೀಟರ್ ಸುತ್ತಿಕೊಂಡು ಬರಬೇಕಾಗಿದ್ದು ಅನುಭವ.

ಆಹಾರ:– ಬಿಗ್ ಬಜಾರ್‌ನಲ್ಲಿ ಸಸ್ಯಹಾರಿಗಳಿಗೂ, ಮಾಂಸಹಾರಿಗಳಿಗೂ ಅಗತ್ಯವಿರುವ ರುಚಿಕರವಾದ, ಪೌಷ್ಟಿಕ ಆಹಾರದ ಸಾಮಾನುಗಳನ್ನು ಮತ್ತು ಮಕ್ಕಳು ಇಷ್ಟಪಡುವ ಆಹಾರಗಳನ್ನು ನೀಡಿ ನಾವೇ ಪೆಟ್ರೋಲ್ ಪದ್ಧತಿಯಲ್ಲಿ ಸಿದ್ದಪಡಿಸಿಕೊಳ್ಳುವ ಅಂಶ ತುಂಬಾ ಚೆನ್ನಾಗಿತ್ತು. ಔತಣಕೂಟ: ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಆಹ್ವಾನ, ಊಟ, ಸಂಸ್ಕೃತಿ, ವೇಷಭೂಷಣ, ಭಾಷೆ, ಗಿಫ್ಟ್ ಬದಲಾವಣೆ ಇದು ಬಹಳ ಚೆನ್ನಾಗಿತ್ತು.

ಸೌರಶಕ್ತಿ:– **12,000** ಎಕರೆ ಪ್ರದೇಶದಲ್ಲಿ ಅಗತ್ಯವಿರುವ ಕಡೆ ಎಂದರೆ ಶೌಚಾಲಯ, ಕಛೇರಿ, ಚಟುವಟಿಕೆಗಳ ಸ್ಥಳ ಇಲ್ಲಿ ಮಾತ್ರ ಎಲೆಕ್ಟ್ರಿಸಿಟಿ ಮತ್ತು ಸೌರಶಕ್ತಿ.

**Swapping:** ಮಕ್ಕಳು ಮಕ್ಕಳೊಂದಿಗೆ (ಸ್ಕೌಟ್ಸ್–ಗೈಡ್ಸ್) ವಯಸ್ಕರರು ವಯಸ್ಕರೊಂದಿಗೆ ಬ್ಯಾಡ್ಜ್, ಟೀ ಶರ್ಟ್, ಓಗಲ್, ಸ್ಕಾರ್ಫ್, ಟೋಪಿ ಇತ್ಯಾದಿ ವಸ್ತುಗಳನ್ನು ದೇಶ ದೇಶಗಳಿಂದ ಬದಲಾಯಿಸಿಕೊಂಡ ರೀತಿ ನೀತಿ ತುಂಬಾ ಚೆನ್ನಾಗಿತ್ತು. ಇದರಿಂದ ಸ್ನೇಹ ಬಾಂದವ್ಯ, ಪ್ರೀತಿ ವಿಶ್ವಾಸ ಬೆಳೆದುದರ ಜೊತೆ ಸವಿನೆನಪುಗಳ ವಿನಿಮಯ ನಮ್ಮಲ್ಲಿ ಮನಸಂತೋಷಿಸಿತು.

**ಸಾಮಾನ್ಯವಾಗಿ ಕಂಡುಬಂದಿರುವ ಕೆಲವು ಅಂಶಗಳು**

1. ಸಮಯದ ಮಹತ್ವ
2. ಅವರವರ ಕೆಲಸ ಅವರೇ ಮಾಡಿಕೊಳ್ಳಬೇಕು
3. ನಗು ನಗುತ್ತಾ ಮಾತನಾಡುವುದು
4. ಇನ್ನೊಬ್ಬರ ತಪ್ಪನ್ನು ಎತ್ತಿಹಿಡಿಯದೇ ಸರಿಪಡಿಸುವುದು
5. ಪ್ರತಿಯೊಬ್ಬರೂ ಮುಖ್ಯ
6. ನಮ್ಮ ಜವಾಬ್ದಾರಿಯ ಅರಿವು
7 ಇನ್ನೊಬ್ಬರನ್ನು ಪ್ರಶಂಸಿಸುವುದು
8. ಸೌಜನ್ಯತೆ
9. ಕೆಲಸದ ಹಂಚಿಕೆ

ಇವೆಲ್ಲಾ ನಮ್ಮಲ್ಲಿ ಇಲ್ಲ ಎಂದೇನಿಲ್ಲ ಆದರೆ ಅಲ್ಲಿ ಆಚರಣೆಯಲ್ಲಿ ಇದ್ದ ಸಾಮಾನ್ಯ ಅಂಶಗಳಾಗಿದ್ದವು.

ನಮಗೆ ಇಷ್ಟವಾದ ಕೆಲವು ಅಂಶಗಳು:–

ನೋವಾಸ್: ಇದು ಒಂದು ಇಲೆಕ್ಟ್ರಾನಿಕ್ ಉಪಕರಣ ವಾಚ್ ರೀತಿ ಪ್ರತಿಯೊಬ್ಬ ಸ್ಕೌಟ್, ಗೈಡ್, ದಳನಾಯಕರು, ಐ.ಎಸ್.ಟಿ (International Service Team) ಎಲ್ಲರಿಗೂ ನೀಡಿದ್ದರು. ಇದರಿಂದ ನಾವು ವಿಶ್ವದ ಬಹಳಷ್ಟು ಸ್ನೇಹಿತರನ್ನು ಅವರ ವಿವರಗಳನ್ನು ಮುಂದೆ ಸಂಬಂಧ ಸ್ನೇಹತ್ವವನ್ನು ಉಳಿಸಿ ಬೆಳೆಸಿಕೊಳ್ಳುವ ಒಂದು ಉತ್ತಮ ಸದಾವಕಾಶಕ್ಕಾಗಿ ಉಪಕರಣ ಇದಾಗಿತ್ತು, ಅಲ್ಲದೆ ಮಕ್ಕಳು ಚಟುವಟಿಕೆಗಳಲ್ಲಿ ಭಾಗವಹಿಸಿದ ನಂತರ ಆಯಾ ಬೇಸನಲ್ಲಿ ಇದನ್ನು ಒತ್ತಿ ಅಂಕಗಳು/ಪಾಯಿಂಟ್ಸ್‌ಗಳಿರುವ ಒಂದು ಸಾಧನವಾಗಿತ್ತು. ಇದರಿಂದ 40,000 ಮಕ್ಕಳ, ದಳನಾಯಕರ, (International Service Team) ಗಳ ಪಾಯಿಂಟ್ಸ್ ಸೇರಲ್ಪಟ್ಟು ಅತೀ ಹೆಚ್ಚು, ಕಡಿಮೆ ಒಟ್ಟಾರೆ ವೈಯುಕ್ತಿಕ ಅಂಕಗಳನ್ನು ನೋವಾಸ್ ಮೂಲಕ ತಿಳಿಯ ಬಹುದಾಗಿತ್ತು.

ಮಕ್ಕಳಿಗಂತೂ ನಿತ್ಯ ತಮ್ಮ ತಮ್ಮ ಪಾಯಿಂಟ್ಸ್ ನೋಡಿ ಸಂತೋಷವನ್ನು ನಮ್ಮ ಮುಂದೆ ಹಂಚಿಕೊಂಡು ಉತ್ಸಾಹದಿಂದ ಹೆಚ್ಚಿನ ಚಟುವಟಿಕೆಗಳಲ್ಲಿ ಭಾಗವಹಿಸಲು ಈ ಚಿಕ್ಕ ಸಾಧನ ದೊಡ್ಡ ಹುರುಪನ್ನು ತುಂಬುತ್ತಿತ್ತು. ನಾವು ಕೂಡ ಇತರ ದೇಶದ ನಾಯಕರೊಂದಿಗೆ ಗೆಳೆತನವನ್ನು ಇದರಿಂದ ಪಡೆದೆವು.

ನಮ್ಮ ದೇಶಕ್ಕೆ ನೋವಾಸ್ ಮೂಲಕ 4 ಮಕ್ಕಳು ಪಾಯಿಂಟ್ಸ್ ಪಡೆದವರಲ್ಲಿ ಕರ್ನಾಟಕಕ್ಕೆ 3 ಸಲ್ಲಿದ್ದು 2 ಗೈಡ್ಸ್, ಅಂದರೆ ನಿಹಾರಿಕ, ಲಿಖಿತ, ಹಾಗೂ ದರ್ಶನ 1 ಸ್ಕೌಟ್ ಅವಾರ್ಡ್ ಪಡೆದದ್ದು ಹೆಮ್ಮೆಯ ಸಂಗತಿ ಮತ್ತು ಪುನಿತ್ ಮತ್ತು ರಾಘವ ಇವರುಗಳು ವೈಯುಕ್ತಿಕ ಚಟುವಟಿಕೆಗಳಲ್ಲಿ ಗುರುತಿಸಲ್ಪಟ್ಟು ಅಭಿನಂದಿಸಿರುವುದು ಗಮನಾರ್ಹ ಅಂಶ.

**Listening Ear–ಕೇಳುವ ಕಿವಿ :–** ಈ ವಿಷಯವನ್ನು ತಿಳಿಸಲು ಖುಷಿಯಾಗುತ್ತದೆ ಕಾರಣ ಜಾಂಬೂರಿಯಲ್ಲಿ ಮಕ್ಕಳಿಗೆ ಅಥವಾ ದೊಡ್ಡವರಿಗೆ ಯಾವುದೇ ಮಾಹಿತಿ, ಕುಂದುಕೊರತೆ, ಸೌಲಭ್ಯ ಇವುಗಳು ಮುಂದಿನ ವ್ಯವಸ್ಥೆ ಮಾಡುವುದು ಒಂದಾದರೆ ಗೊತ್ತಾಗದಂತೆ ಎಲ್ಲವನ್ನು ವೀಕ್ಷಿಸಿ ಹಿರಿಯ ಅಧಿಕಾರಿಗಳಿಗೆ ತಿಳಿಸಿ ಅಲ್ಲಿ ಆಗುವ ಅನಾಹುತ, ತೊಂದರೆ, ವ್ಯವಸ್ಥೆ ಎಲ್ಲದಕ್ಕೂ "ಈ ಕೇಳುವ ಕಿವಿ" ಮಹತ್ವದ ಪಾತ್ರ ವಹಿಸಿತ್ತು.

**Safe from Harm:-** ಪ್ರತಿಯೊಬ್ಬರೂ ಮುಖ್ಯ, ಒಬ್ಬರು ಇನ್ನೊಬ್ಬರಿಗೆ ಗೌರವದಿಂದ ಮಾತನಾಡುವುದು, ಉತ್ತಮ ನಡವಳಿಕೆ, ಕೆಟ್ಟ ಶಬ್ದಗಳನ್ನು ಬಳಸದೇ ಇರುವುದು, ತಪ್ಪು ಸರಿ ನೋಡಿ ಚಟುವಟಿಕೆಗಳು ಅರಾಮವಾಗಿ ನಡೆಸುವುದು. ದೈಹಿಕವಾಗಿ ಯಾರನ್ನು ಮುಟ್ಟದೇ ಇರುವುದು ಮುಂತಾದ ಅಂಶಗಳನ್ನು ಪಾಲಿಸುವುದು ಬಹಳ ಮುಖ್ಯ ವಿಷಯವಾಗಿತ್ತು.

**Cot/Tent:-** ಪ್ರತಿ ಮಕ್ಕಳು ಮತ್ತು ವಯಸ್ಕರರಿಗೆ ಉತ್ತಮ ಟೆಂಟ್ ವಸತಿ, ಕಾಟ್ ಸೌಲಭ್ಯ ಹಗಲೆಲ್ಲ 10,12–15 ಕಿಲೋ ಮಿಟರ್ ನಡೆದು ಚಟುವಟಿಕೆಯಲ್ಲಿ ಭಾಗವಹಿಸಿ ರಾತ್ರಿ ಸುಖಕರವಾಗಿ ವಿಶ್ರಾಂತಿ ಪಡೆಯಲು ಉತ್ತಮವಾದ ಸೌಲಭ್ಯ ಇದಾಗಿತ್ತು. ಎಲ್ಲಾ ಕಡೆ ಸಿಬ್ಬಂದಿ ವರ್ಗದವರು ನಗು ಮುಖದಿಂದ ಹಾಯ್, ಹಲೋ, ಹೌ ಆರ್ ಯು ಎಂದು ಎಲ್ಲರನ್ನು ಮಾತನಾಡುವುದು, ಸ್ವಾಗತಿಸುವುದು, ಅದರಲ್ಲಿ ಚಟುವಟಿಕೆಗಳಲ್ಲಿ ಸಂಪೂರ್ಣ ಮಾಹಿತಿ ನೀಡಿ, ತರಬೇತಿ ನೀಡಿ ನಂತರ ಭಾಗವಹಿಸುವ ವ್ಯವಸ್ಥೆ ಇದು ನಾನು ಇದುವರೆಗೂ ಎಲ್ಲೂ ನೋಡಿರದ ಮತ್ತು ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಪಾಲಿಸಿದ ಅಂಶಗಳು ಮತ್ತು ಎಲ್ಲಾ ಸೇವೆಗಳು ಶ್ಲಾಘನೀಯವಾದುದ್ದು.

ಒಂದು ಕಡೆಯಿಂದ ಇನ್ನೊಂದು ಕಡೆ ಓಡಾಡಲು ದಾರಿ ಸಂಕೇತ, ಚಿಹ್ನೆಗಳು ಸುಲಭವಾಗಿ ಅರ್ಥ ಮಾಡಿಕೊಳ್ಳಲು ಮಕ್ಕಳ ಕೈಯಲ್ಲಿ W.S.J. ಸಂಪೂರ್ಣ ನಕ್ಷೆ "ದಡ್ಡರನ್ನು ಜಾಣರನ್ನಾಗಿ"ಮಾಡುವಂತಿತ್ತು.

**ಸಿಬ್ಬಂದಿಯವರ ಸಮಯಪ್ರಜ್ಞೆ, ಕೆಲಸದಲ್ಲಿ ನೋಡುವ ಬಗೆ ನಗುಮುಖದಿಂದ ತರಬೇತಿ ಇವು ನಾಯಕರಿಗೆ ಇರಬೇಕಾದ ಗುಣಗಳು ಎಂಬ ಬೇಡನ್ ಪಾವೆಲರ ಸಂದೇಶ ನಮ್ಮಲ್ಲಿ ಪಾಲಿಸುವಂತೆ ಕಂಡು ಬಂದವು.**

ಜುಲೈ 26ರಂದು ರಾಜ್ಯ ಮುಖ್ಯ ಆಯುಕ್ತರೊಂದಿಗೆ ಮಿಸ್ಟರ್ ಪೌಲ್ ಜಾಂಬೂರಿಯ ಆಡಳಿತ ಸದಸ್ಯರು ನಮ್ಮ ಬೇಸ್‌ಗೆ ಆಗಮಿಸಿ ಆತಿಥ್ಯವನ್ನು ಸ್ವೀಕರಿಸಿದರು ರಂಗೋಲಿ, ಮೆಹಂದಿ, ವಿವಿಧ ವೇಷಭೂಷಣಗಳು ಆಹಾರ ಕ್ರಮ, ಶಿಕ್ಷಣ, ನಿತ್ಯಕರ್ಮ ಇವುಗಳ ಬಗ್ಗೆ ಇತರ ದೇಶದ ಸ್ಕೌಟ್, ಗೈಡ್, ಶಿಕ್ಷಕರು, ಐ.ಎಸ್.ಟಿಗಳೊಂದಿಗೆ ಚರ್ಚಿಸಿದರು ಕಮಿಷಿನರ್ ನಮ್ಮ ಆತಿಥ್ಯವನ್ನು ಸ್ವೀಕರಿಸಿ ಮೆಚ್ಚುಗೆ ಸೂಚಿಸಿ It is Spicy ಎನ್ನುತ್ತ "ವ್ಹಾವ್ ಇಂಡಿಯಾ" ಎನ್ನುವ ಪದ ಸಂತೋಷವನ್ನು ನೀಡಿತು. ಕು. ಸ್ವೀಕೃತಿ ಬೇಸ್‌ನಲ್ಲಿ ಭರತ ನಾಟ್ಯವನ್ನು ಪ್ರದರ್ಶಿಸಿ Amazing India ಎನ್ನುವಂತೆ ಪೂಜನೀಯ ಉತ್ತಮ ಕಲೆಯನ್ನು ಪ್ರದರ್ಶಿಸಿದರು.

ಜುಲೈ 26ರಂದು ನಮ್ಮ ಮಕ್ಕಳು ಅತ್ಯುತ್ತಮವಾದ ದೇಶಭಕ್ತಿ, ಗಜಾನನ ಸ್ತೋತ್ರ, ವಂದೇ ಮಾತರಂ, ಜಾಂಬೂರಿ ಸ್ವಾಗತ ಗೀತೆ ಇವುಗಳನ್ನೊಳಗೊಂಡ ನೃತ್ಯ ಪ್ರದರ್ಶನವು ಎಲ್ಲಾ ದೇಶಗಳ ಮಕ್ಕಳು ಅಭನಂದಿಸಿದ್ದು ಮತ್ತು ಇದೇ ನೃತ್ಯ Central Mandal ದಲ್ಲಿ ಪ್ರದರ್ಶನಗೊಂಡಿದ್ದು ಉತ್ತಮವಾಗಿತ್ತು. ಬೆಂಗಳೂರು ದಕ್ಷಿಣ ಜಿಲ್ಲೆಯ ಸುಪ್ರಿತ್ ಬಾಲಾಜಿ ಇವರು ಉದ್ಘಾಟನಾ ಸಮಾರಂಭಕ್ಕೆ ಭಾರತ ತಂಡದಿಂದ ರಾಷ್ಟ್ರಧ್ವಜವನ್ನು ಹೆಮ್ಮೆ ಗೌರವದಿಂದ ಹಿಡಿದು ನಾವು ಭಾರತೀಯರು ಎಂಬ ಸಂದೇಶ ವಿಶ್ವಕ್ಕೆ ತಿಳಿಸಿದ್ದು, ನಮ್ಮ ದೇಶದ ಎಲ್ಲರೂ India, India ಎಂದು ಘೋಷಿಸಿದ್ದು 150 ದೇಶಗಳ ಮುಂದೆ ರೋಮಾಂಚನವನ್ನು ಉಂಟು ಮಾಡಿತು.

ಸುಪ್ರಿತ್ ಬಾಲಾಜಿ ಭಾರತದಿಂದ ಗ್ಲೋಬಲ್ ಅಂಬಾಸಿಡರ್ ಆಗಿ ಆಯ್ಕೆಯಾಗಿ ವಿಶೇಷ ಅವಕಾಶಗಳನ್ನು ನಮಗೆ ಪಡೆದದ್ದು ಹಾಗೂ ರೀಜಿನಲ್ ಪ್ರೇಯರ್‌ನಲ್ಲಿ "ಭಗವದ್ಗೀತೆ"ಯನ್ನು ಪಠಣ ಮಾಡಿ "ಸರ್ವೇ ಜನ ಸುಖಿನೋ ಭವಂತು" ಎಂಬ ಸಂದೇಶ ಸರ್ವರಿಗೂ ಇಷ್ಟವಾಯಿತು ಇದು ಕೂಡ ಕರ್ನಾಟಕ ತಂಡಕ್ಕೆ ಹೆಮ್ಮೆ ತಂದಿರುವ ವಿಷಯ.




ಬೇರ್ ಗ್ರಿಲ್ ಬಾಯ್ ಸ್ಕೌಟ್ ಆಫ್ ಅಮೇರಿಕಾದ ಅಂಬಾಸಿಡರ್ ಎಲ್ಲಾ ಯುವ ಯುವತಿಯರ ಹೀರೋ ಇವರು ಉದ್ಘಾಟನಾ ಸಮಾರಂಭದಲ್ಲಿ " ಹಲೋ ಇಂಡಿಯಾ ಐ ಲವ್ ಯೂ" ಎಂದು ಘೋಷಿಸಿದ್ದು ನಮ್ಮ ಸ್ಕೌಟ್ ಗೈಡ್‌ಗಳಿಗೆ ಕುಣಿದು ಕುಪ್ಪಳಿಸಿದ್ದು ಸಂತೋಷದ ಸಂಗತಿ.

ನಮ್ಮ ಮಕ್ಕಳು ಉತ್ಸಾಹದಿಂದ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಭಾರತದ ಎಲ್ಲಾ ಮಕ್ಕಳಲ್ಲಿ ಕರ್ನಾಟಕದ 42 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಆರೋಗ್ಯದಿಂದ ಜಾಂಬೂರಿಯಲ್ಲಿ ಭಾಗವಹಿಸಿದ್ದರು ಮತ್ತು ಜಾಂಬೂರಿಯು ಯುವ ಜನತೆಯ ಪ್ರೀತಿ ಸ್ನೇಹ ಸಂತಸದ ಹೊನಲಲ್ಲಿ ಮಿಂದೆದ್ದು ನವ ಸಂದೇಶದ ಸ್ಕೌಟ್ಸ್ ಮತ್ತು ಗೈಡ್ಸ್ ಹೊಸ ಬಾಳಿಗೆ ನಾಂದಿಯಾಗಲಿರುವ ಜಾಂಬೂರಿಯನ್ನು ಮುಗಿಸಿ ಹೃದಯ ತುಂಬಿ ನಲುಮೆಯಿಂದ ಮರಳಿ ಭಾರತಾಂಬೆ ಮಡಿಲನ್ನು ಸೇರಿದೆವು.

ಈ ಸ್ನೇಹದ ಸೇತುವೆ ಕಟ್ಟಿ ಸ್ಕೌಟ್ಸ್ ಮತ್ತು ಗೈಡ್ಸ್ ಜೀವನದಲ್ಲಿ 24ನೇ ಸ್ಕೌಟ್ ಜಾಂಬೂರಿ ಮರೆಯಲಾಗದ ಸವಿ ನೆನಪು.

– ಜೈಸ್ಕೌಟಿಂಗ್

## "ರಾಜ್ಯ ಮುಖ್ಯ ಆಯುಕ್ತರ ಮನೋಬಲದ ಬೆಂಬಲ"

ಭಾರತ ದೇಶದ ತಂಡದ ನಾಯಕರಾಗಿ ಮಾನ್ಯ ಶ್ರೀ. ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಭಾಗವಹಿಸಿ ಒಂದು ಮಾದರಿ ಸಿ.ಎಂ.ಟಿ ಆಗಿ, ಜಾಂಬೂರಿಯ ಪ್ರತಿಯೊಂದು ಅಂಶಗಳನ್ನು ಅನುಭವಿಸಿ, ಅವಲೋಕಿಸಿ ಉತ್ತಮವಾದ ಸಂದೇಶವನ್ನು ನಮಗೆ ನೀಡಿದರು.

ಬೆಳಿಗ್ಗೆ 7.30 ರಿಂದ ಸಂಜೆ 7.00ರ ವರೆಗೆ ಸಿ.ಎಂ.ಟಿ. ಗಳ ಮತ್ತು ಇತರೆ ಚಟುವಟಿಕೆಗಳಲ್ಲಿ ಸಭೆಯಲ್ಲಿ ಭಾಗವಹಿಸಿ ಪ್ರತಿ ಗಂಟೆಯನ್ನು ಅರ್ಥಪೂರ್ಣ ಉಪಯೋಗಿಸಿಕೊಂಡರು. ಅಂದರೆ ಸಭೆಗಳಲ್ಲಿ ಭಾಗವಹಿಸಿ ಸ್ಕೌಟಿಂಗ್ ಅಂಶಗಳನ್ನು ಅರ್ಥಮಾಡಿಕೊಂಡು, ಅಭಿವೃದ್ಧಿಯ ಬಗ್ಗೆ ಚರ್ಚಿಸಿ ಉತ್ತಮ ನಿರ್ಧಾರ ಕೈಗೊಳ್ಳಲು ಜಾಂಬೂರಿಯು ಉತ್ತಮ ವೇದಿಕೆಯಾಯಿತು.

10 ದಿನಗಳ ಕಾಲ ಎಲ್ಲ ಸಿ.ಎಂ.ಟಿ/ ಐ.ಎಸ್.ಟಿ ಗಳೊಡನೆ ಶಿಬಿರ ಕೇಂದ್ರದಲ್ಲಿ ತಂಗಿದ್ದರು. ಪ್ರತಿಯೊಂದು ದೇಶದ ವಸ್ತುಪ್ರದರ್ಶನ ಭೇಟಿ ಮಾಡಿ ಆ ದೇಶದ ಸ್ಕೌಟಿಂಗ್ ಬೆಳವಣಿಗೆ, ವ್ಯವಸ್ಥೆ, ಮುಖ್ಯ ಅಧಿಕಾರಿಗಳು, ಪದಾಧಿಕಾರಿಗಳು, ಕಾರ್ಯಕ್ರಮ ಮುಂತಾದವುಗಳನ್ನು ಅವರೊಂದಿಗೆ ಅಮೂಲ್ಯ ಮಾತುಕತೆ ನಡೆಸಿದರು. WOSMನ ವಿಶ್ವದ ಎಲ್ಲಾ ನಾಯಕರುಗಳನ್ನು ಭೇಟಿ ಮಾಡಿದರು.

ಶ್ರೀ ಅಮರ ಛತ್ರಿ, ಜಂಟಿ ನಿರ್ದೇಶಕರು, ರಾಷ್ಟ್ರ ಸಂಸ್ಥೆ, ನವದೆಹಲಿ ಇವರ ಮಾರ್ಗದರ್ಶನ ಮತ್ತು ನಾಯಕತ್ವದಲ್ಲಿ ಉತ್ತಮ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆ ನಮ್ಮ ದೇಶಕ್ಕೆ ದೊರಕಿತು.

ಶ್ರೀ ಎಲ್.ಟಿ. ಲೋಕೇಶ್, ಸಹ ಕಾರ್ಯದರ್ಶಿ, ಶ್ರೀ ಪ್ರಭಾಕರ್ ಭಟ್, ಎಸ್.ಒ.ಸಿ (ಸ್ಕೌ), ಶ್ರೀಮತಿ ಸಿ. ಮಂಜುಳಾ, ಎಸ್.ಒ.ಸಿ(ಗೈ), ಶ್ರೀಮತಿ ಕೆ.ವಿ. ಶಾಮಲ, ಎಸ್.ಟಿ.ಸಿ (ಗೈ), ಶ್ರೀಮತಿ ಕುಮಾರಿ ಹೊನ್ನಮ್ಮ, ಎಎಸ್‌ಒಸಿ, ಶ್ರೀಮತಿ ಮಲ್ಲೇಶ್ವರಿ ಜುಜಾರೆ, ಎಎಸ್‌ಒಸಿ ಶ್ರೀ ವಿಠಲ್ ಬಾಚಗುಂಡಿ, ಡಿ.ಒ, ಶ್ರೀ ಅಶೋಕ್ ಕುಮಾರ್, ಡಿ.ಒ, ಶ್ರೀ ರಾಚೋಟಯ್ಯ, ಡಿ.ಒ, ನಾವು 9 ಜನ ರಾಜ್ಯ ವೃತ್ತಿನಿರತರು ಭಾಗವಹಿಸಲು ಅವಕಾಶ ಸಿಕ್ಕಿತ್ತು. ನಮಗೆ ಅಂತರಾಷ್ಟ್ರೀಯ ಮಟ್ಟದ ವ್ಯವಸ್ಥೆ, ಕಾರ್ಯಕ್ರಮ, ಪದ್ಧತಿ, ಶಿಸ್ತು, ಮುಂತಾದುವುಗಳನ್ನು ತಿಳಿದುಕೊಂಡಿರುವುದು ನಮ್ಮೆಲ್ಲರ ಸುದೈವ, ರಾಜ್ಯ ಸಂಸ್ಥೆಗೆ ನಾವು ಸದಾ ಚಿರಋಣಿಯಾಗಿರುತ್ತೇವೆ.

ಶ್ರೀ ಎ.ಎಸ್. ಮಧುಸೂಧನ್, ಖಜಾಂಚಿ, ಜಿಲ್ಲಾ ಸಂಸ್ಥೆ, ಬೆಂಗಳೂರು ದಕ್ಷಿಣ ಇವರು ಭಾರತ ಮತ್ತು ಕರ್ನಾಟಕ ತಂಡದ ಯಶಸ್ವಿಗೆ ಅತ್ಯುತ್ತಮ ಮತ್ತು ಕ್ರೀಯಾಶೀಲವಾದ ಮಾರ್ಗದರ್ಶನ ನೀಡುವುದರ ಜೊತೆಗೆ WOSM ಹಾಗು ಜಾಂಬೂರಿ ಆಯೋಜಕರೊಂದಿಗೆ ನಿಕಟ ಮತ್ತು ಆತ್ಮೀಯ ಸಂಪರ್ಕದಿಂದ ಯುವ ಪ್ರತಿಭೆಯಾಗಿದ್ದು ನಮ್ಮ ರಾಜ್ಯಕ್ಕೆ ಹೆಮ್ಮೆಯ ವಿಷಯ.

ಕರ್ನಾಟಕದ ಶ್ರೀಮತಿ ಬಿ.ವಿ. ರಾಮಲತಾ, ಜೆ.ಎಸ್.ಎಸ್.(ಗೈ), ಶ್ರೀಮತಿ ಎಸ್.ವಿ. ಸುಮನಾ, ಹೆಚ್‌ಕ್ಯೂಸಿ(ಗೈ), ಶ್ರೀ ಎಂ.ಕೆ. ಖಾನ್, ವೇಣುಗೋಪಾಲ್, ಶ್ರೀ ಸಿದ್ದಾರ್ಥ, ಬೆಂಗಳೂರು ದಕ್ಷಿಣ, ಶ್ರೀ ಸುರೇಂದ್ರ ಪಾ, ಶ್ರೀ ನಂದಕುಮಾರ್, ತುಮಕೂರು, ಶ್ರೀ ಕಾಂತಿಲಾಲ್, ದಾವಣಗೆರೆ, ಶ್ರೀ ರೋಹಿತ್, ಮಂಡ್ಯ, ಶ್ರೀಮತಿ ಅನುಶಾ ಚಿಕೋಡ್, ಶ್ರೀ ಬಿ.ಎಂ. ತುಂಬೆ, ದಕ್ಷಿಣ ಕನ್ನಡ, ಶ್ರೀ ಅಜಯ್ ಜೈನ್, ಶ್ರೀ ಅಂಚನಾ, ಶ್ರೀ ಜಮದಗ್ನಿ, ಮೈಸೂರು, ಪ್ರೊ. ಪಾಸೋಡಿ, ಶ್ರೀ ಎಸ್. ಸುಳ್ಳದ್, ಕಲ್ಬುರ್ಗಿ, ಶ್ರೀಮತಿ ನಿಹಾರಿಕ ಮಲ್ಲಿಕಾರ್ಜುನ, ಶ್ರೀ ಚೇತನ್, ಚಿಕ್ಕಮಗಳೂರು ಇವರುಗಳು ಅಂತರಾಷ್ಟ್ರೀಯ ಸೇವಾ ತಂಡದ ಸದಸ್ಯರಾಗಿ ಉತ್ತಮವಾಗಿ ಸೇವೆ ಸಲ್ಲಿಸಿರುತ್ತಾರೆ.

WOSM ಪದಾಧಿಕಾರಿಗಳು, ಜಾಂಬೂರಿ ಆಯೋಜನಾಧಿಕಾರಿಗಳನ್ನು ಭೇಟಿ ಮಾಡಿ ಮಾಹಿತಿ ಸಂಗ್ರಹಿಸಿದ್ದು, ಮಹತ್ವದ ಕಾರ್ಯ ಏಕೆಂದರೆ "ಕರುನಾಡಿನ ಸ್ಕೌಟಿಂಗ್"ಅನ್ನು ವಿಶ್ವದೆತ್ತರಕ್ಕೆ ಏರಿಸುವ ಮಹದಾಶೆಯುಳ್ಳ ಶ್ರೀ ಪಿ.ಜಿ.ಆರ್. ಸಿಂಧ್ಯರ ಮಹತ್ವದ ಅಭಿಲಾಷೆ ಮತ್ತು ಅವರ ಸರಳ ಮಾತುಕತೆ, ಎತ್ತರದ ಅಭಿಪ್ರಾಯಗಳನ್ನು ನಮ್ಮೊಂದಿಗೆ ಹಂಚಿಕೊಂಡಿರುವುದು ನಮ್ಮ ಪುಣ್ಯವೇ ಸರಿ ಇವರ ಮನೋಬೆಂಬಲಕ್ಕೆ ದೇವರ ಬೆಂಬಲ ಇರಲೆಂದು ಬೇಡಿಕೊಳ್ಳುವ ಈ ಕೆಳಗಿನ ನಾವುಗಳು ರಾಜ್ಯ ಸಂಸ್ಥೆಗೆ ಅಭಾರಿಯಾಗಿದ್ದೇವೆ ಮತ್ತು ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ.







ಭಾರತದ ಸ್ಕೌಟ್ಸ್-ಗೈಡ್ಸ್ ತಂಡ
ರಾಜ್ಯ ಮುಖ್ಯ ಆಯುಕ್ತರೊಂದಿಗೆ



ಕರ್ನಾಟಕದ ಕುಲಂಜಿಯ ತಂಡ



24ನೇ ವಿಶ್ವಜಾಂಬೂರಿಯ
ಸುಂದರ ವಿಹಂಗಮ ನೋಟ



ಜಾಂಬೂರಿಯ ಒಂದು ನೋಟ



ಜೈ ಭಾರತಾಂಬೆ
ಕರುನಾಡ ಮಕ್ಕಳಿಂದ



ಭಾರತ ತಂಡದ ಕೇಂದ್ರ ಕಛೇರಿಯಲ್ಲಿ
ನಮ್ಮ ವಸ್ತು ಪ್ರದರ್ಶನ
ಮತ್ತು ಇತರೆ ಚಟುವಟಿಕೆಗಳ ಭಾವಚಿತ್ರ



ಜಾಂಬೂರಿಯ ಒಂದು ಉತ್ತಮ ಚಟುವಟಿಕೆ
ಶಾಂತಿ, ಗುರಿಯನ್ನು
ತಲುಪಲು ಚರ್ಚೆ ಚಟುವಟಿಕೆ



ರಾಕ್‌ಲೈನ್ ಗೋಡೆ ಹತ್ತುವ ಸಾಹಸದಿಂದ
ಎತ್ತರಕ್ಕೆರುವ ನಮ್ಮ ಮಕ್ಕಳು



ನೀರಿನಲೆಯಲ್ಲಿ ಸ್ಕೌಟ್ಸ್-ಗೈಡ್ಸ್
ಪಯಣದ ಹಾದಿ



ಜಪ್‌ಲೈನ್ ರೋಮಾಚನಕಾರಿ
ಅದ್ಬುತ ಸಾಹಸ ಚಟುವಟಿಕೆ



ಆಗಸ್ಟ್ 28ರಂದು ಸೆಂಟಲ್ ಮಂಡೆಲಾ ವೇದಿಕೆಯಲ್ಲಿ ಕರ್ನಾಟಕದ ಸ್ಕೌಟ್ಸ್-ಗೈಡ್ಸ್‌ಗಳು ಉತ್ತಮ ನೃತ್ಯ ಪ್ರದರ್ಶನ ನೀಡಿದರು. ರಾಜ್ಯ ಮುಖ್ಯ ಆಯುಕ್ತರು ಅಭಿನಂದಿಸಿದ ಸಮಯ.




ವಿಶ್ವದ ಹಿರಿಯ ರಾಷ್ಟ್ರಪತಿ ಸ್ಕೌಟ್ ಮತ್ತು ಗೈಡ್ಸ್‌ಗಳ ATAS ಸಮಾವೇಶ



ಜುಲೈ 29ರಂದು ಅಮೇರಿಕಾದ ಒಂದು ಟ್ರೂಪ್ ನೂಯಾರ್ಕ್ ನಗರದ ಸ್ಕೌಟ್ಸ್ ತಂಡದ ನಾಯಕರೊಂದಿಗೆ ಕರ್ನಾಟಕ ತಂಡದವರ ಔತಣ ಕೂಟಕ್ಕೆ ಭಾಗವಹಿಸಿದ ಸಂದರ್ಭ



ಮಿಸ್ಟರ್ ಪೌಲ್ ಜಾಂಬೂರಿ ವ್ಯವಸ್ಥಾಪಕರು/ಆಡಳಿಕಾರರು ಅಧಿಕಾರಿಗಳೊಂದಿಗೆ ರಾಜ್ಯ ಮುಖ್ಯ ಆಯುಕ್ತರು ಶ್ರೀ ಅಮರ್ ಛತ್ರಿ ಹಾಗೂ ಎಸ್.ಓ.ಸಿ/ಎಸ್.ಟಿ.ಸಿ ಗಳು

# ಶ್ರೀ ಅರುಣ್ ಜೇಟ್ಲಿ ಅವರಿಗೆ
## ಶ್ರದ್ಧಾಪೂರ್ವಕ ಸ್ಮರಣೆ




ಶ್ರೀ ಅರುಣ್ ಜೇಟ್ಲಿ, ಕೇಂದ್ರ ಹಣಕಾಸು ಮಾಜಿ ಸಚಿವರು, ಭಾರತ ಸರ್ಕಾರ, ಇವರ ಸ್ಮರಣೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ವಿದ್ಯಮಾನ ವೇದಿಕೆ, ಕರ್ನಾಟಕ ಸಹಯೋಗದೊಂದಿಗೆ ಆಗಸ್ಟ್ 28 ರಂದು ಕೊಂಡಜ್ಜಿ ಬಸಪ್ಪ ಸಭಾಂಗಣ, ಶಾಂತಿಗೃಹ, ಅರಮನೆ ರಸ್ತೆ, ಬೆಂಗಳೂರಿನಲ್ಲಿ ನಡೆಸಲಾಯಿತು.

ಶ್ರೀ ಎಸ್. ಸುರೇಶ್ ಕುಮಾರ್, ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ. ಶ್ರೀ ರಾಜಾ ಶೈಲೇಶ್‌ಚಂದ್ರ ಗುಪ್ತ, ಅಧ್ಯಕ್ಷರು, ವಿದ್ಯಮಾನ ವೇದಿಕೆ, ಶ್ರೀ ಮಹಿಮಾ ಪಟೇಲ್, ಅಧ್ಯಕ್ಷರು, ಜೆ.ಡಿ.ಯು, ಶ್ರೀ ಎಂ.ಪಿ. ಕುಮಾರ್, ಸಮಾಜ ಸೇವಕರು, ಶ್ರೀ ಕೆ. ದಿವಾಕರ್, ಹಿರಿಯ ನ್ಯಾಯವಾದಿಗಳು ಶ್ರೀ ಅರುಣ್ ಜೇಟ್ಲಿ ಅವರೊಂದಿಗೆ ಹೊಂದಿದ್ದ ಅನುಭವಗಳನ್ನು ತಿಳಿಸಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ಕರ್ನಾಟಕ ವಿಧಾನ ಪರಿಷತ್ ಸದಸ್ಯರು, ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್ಸ್) ಹಾಗೂ ದಿವಂಗತ ಶ್ರೀ ಅರುಣ್ ಜೇಟ್ಲಿ ಅವರೊಂದಿಗೆ ನಿಕಟ ಸಂಪರ್ಕ ಹೊಂದಿದ್ದ ರಾಜ್ಯದ ಅನೇಕ ಮುಖಂಡರು ಭಾಗವಹಿಸಿದ್ದರು. ಸಭೆಯಲ್ಲಿ ಶ್ರೀ ಅರುಣ್ ಜೇಟ್ಲಿ ಅವರ ವ್ಯಕ್ತಿತ್ವದ ಬಗ್ಗೆ ಎಲ್ಲರೂ ಸ್ಮರಣೆ ಮಾಡಿದರು.





ಆಗಸ್ಟ್ 15ರಂದು **ಉಡುಪಿ** ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ಪ್ರಥಮ ಬಹುಮಾನ ಪಡೆದ ಇ.ಎಂ.ಹೆಚ್.ಎಸ್ ಕುಂಜುಬೆಟ್ಟು ಶಾಲೆಯ ಸ್ಕೌಟ್ ತಂಡಕ್ಕೆ ಜಿಲ್ಲಾಧಿಕಾರಿಗಳಾದ ಶ್ರೀಮತಿ ಎಪ್ಸಿಬಾರಾಣಿ ಅವರು ಪಾರಿತೋಷಕವನ್ನು ನೀಡಿದರು. ಸ್ಕೌಟ್ಸ್-ಗೈಡ್ಸ್‌ಗಳು, ಇತರರು ಚಿತ್ರದಲ್ಲಿದ್ದಾರೆ.



ಆಗಸ್ಟ್ 15ರಂದು **ಮಂಡ್ಯ** ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ಪ್ರಥಮ ಬಹುಮಾನ ಪಡೆದ ರೋಟರಿ ವಿದ್ಯಾ ಸಂಸ್ಥೆ ಸ್ಕೌಟ್ ತಂಡಕ್ಕೆ ಜಿಲ್ಲಾಧಿಕಾರಿಗಳಾದ ಡಾ॥ ಎಂ.ವಿ. ವೆಂಕಟೇಶ್ ಅವರು ಪಾರಿತೋಷಕವನ್ನು ನೀಡಿದರು. ಪೋಲಿಸ್ ವರಿಷ್ಠಾಧಿಕಾರಿ ಡಾ. ಕೆ. ಪರಶುರಾಮ್, ಮಾನ್ಯ ಶಾಸಕರಾದ ಶ್ರೀ ಎಂ. ಶ್ರೀನಿವಾಸ್ ಇತರರು ಚಿತ್ರದಲ್ಲಿದ್ದಾರೆ.



ಆಗಸ್ಟ್ 15ರಂದು **ರಾಯಚೂರು** ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ಪ್ರಥಮ ಬಹುಮಾನ ಪಡೆದ ಸರ್ಕಾರಿ ಪ್ರೌಢಶಾಲೆ ಜಹೀರಾಬಾದ್ ಗೈಡ್ ತಂಡಕ್ಕೆ ಜಿಲ್ಲಾಧಿಕಾರಿಗಳಾದ ಶ್ರೀ ಬಿ. ಶರತ್ ಪಾರಿತೋಷಕವನ್ನು ನೀಡಿದರು. ಪೋಲಿಸ್ ವರಿಷ್ಠಾಧಿಕಾರಿ ಶ್ರೀ ವೇದಮೂರ್ತಿ, ಡಿಡಿಪಿಐ ಶ್ರೀ ನಂದಮೂರಿ, ಸ್ಕೌಟ್ಸ್-ಗೈಡ್ಸ್‌ಗಳು ಇತರರು ಚಿತ್ರದಲ್ಲಿದ್ದಾರೆ.



ಆಗಸ್ಟ್ 15ರಂದು **ಹಾಸನ** ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ದ್ವಿತೀಯ ಬಹುಮಾನ ಪಡೆದ ಬಸವರಾಜೇಂದ್ರ ಶಾಲೆ ಸ್ಕೌಟ್ ತಂಡಕ್ಕೆ ಮಾನ್ಯ ಶಾಸಕರಾದ ಶ್ರೀ ಪ್ರೀತಮ್ ಗೌಡರವರು ಪಾರಿತೋಷಕವನ್ನು ನೀಡಿದರು. ಜಿಲ್ಲಾಧಿಕಾರಿ ಡಾ. ಅಕ್ರಮ್ ಪಾಷ, ಪೊಲೀಸ್ ವರಿಷ್ಠಾಧಿಕಾರಿ ಡಾ. ಪ್ರಕಾಶ್ ಗೌಡ, ಸ್ಕೌಟ್ಸ್-ಗೈಡ್ಸ್‌ಗಳು, ಇತರರು ಚಿತ್ರದಲ್ಲಿದ್ದಾರೆ.



ಆಗಸ್ಟ್ 15ರಂದು **ಚಾಮರಾಜನಗರ** ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ದ್ವಿತೀಯ ಬಹುಮಾನ ಪಡೆದ ಸೇಂಟ್ ಜೋಸೆಫ್ ಶಾಲೆಯ ಸ್ಕೌಟ್ ತಂಡಕ್ಕೆ ಶ್ರೀ ಶಂಕರ್, ಡಿ.ಎಫ್.ಓ., ಅವರು ಪಾರಿತೋಷಕವನ್ನು ನೀಡಿದರು. ಮಾನ್ಯ ಶಾಸಕರಾದ ಶ್ರೀ ಸಿ. ಪುಟ್ಟರಂಗಶೆಟ್ಟಿ, ಜಿಲ್ಲಾಧಿಕಾರಿ ಶ್ರೀಮತಿ ಬಿ.ಬಿ. ಕಾವೇರಿ, ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಆನಂದ ಕುಮಾರ್ ಹಾಗು ಇತರರು ಚಿತ್ರದಲ್ಲಿದ್ದಾರೆ.



ಆಗಸ್ಟ್ 15ರಂದು **ಯಾದಗಿರಿ** ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನದಲ್ಲಿ ಪ್ರಥಮ ಬಹುಮಾನ ಪಡೆದ ಸ.ಹಿ.ಪ್ರಾ. ಶಾಲೆ, ಅಲ್ಲಾಪುರ ಗೈಡ್ ತಂಡಕ್ಕೆ ಜಿಲ್ಲಾಧಿಕಾರಿ ಶ್ರೀ ಕುರ್ಮಾರಾವ್ ಅವರು ಪ್ರಶಸ್ತಿ ನೀಡಿದರು. ಪೊಲೀಸ್ ವರಿಷ್ಠಾಧಿಕಾರಿ ಶ್ರೀ ರುಷಿಕೇಶ್ ಸೋನಾವಾಣೆ, ಸಿ.ಇ.ಓ. ಶ್ರೀಮತಿ ಕವಿತಾ ಮನ್ನಿಕೇರಿ ಮತ್ತು ಜಿ.ಪಂ. ಉಪಾಧ್ಯಕ್ಷೆ ಶ್ರೀಮತಿ ಗಿರಿಜಮ್ಮ ಸದಾಶಿವರೆಡ್ಡಿ ಚಿತ್ರದಲ್ಲಿದ್ದಾರೆ.

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 56)

## ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ನಡೆದ ಸದ್ಭಾವನಾ ದಿನಾಚರಣೆಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು


ಬೆಂಗಳೂರು ಉತ್ತರ


ಶಿವಮೊಗ್ಗ


ದಕ್ಷಿಣ ಕನ್ನಡ



ಚಿಕ್ಕಮಗಳೂರು


ಬೆಂಗಳೂರು ಗ್ರಾಮಾಂತರ


ಬಾಗಲಕೋಟೆ



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

Published by : The Bharat Scouts & Guides, Karnataka, State Headquarters
Shanthi Gruha #39, Palace Road, Bengaluru - 560 001. Publisher & Editor : K. Gangappa Gowda, Printed by : L. Lingappa
M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru 26